# ತೆಗ್ಗಿನಮಠದ ಪರಂಪರೆ

(ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ಕಿರುಪ್ರಬಂಧ)

ಸಂಶೋಧಕರು
ಎಂ.ಎಸ್. ಸೋಮಶೇಖರಯ್ಯ

ಮಾರ್ಗದರ್ಶಕರು
ಡಾ. ಹರಿಶ್ಚಂದ್ರ ದಿಗ್ಸಂಗಿಕರ್
ಹಿ.ಶ್ರೇ. ಅಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬





ಸಮಾಜ ವಿಜ್ಞಾನ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ತೆಗ್ಗಿನಮಠದ ಪರಂಪರೆ

(ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ಕಿರುಪ್ರಬಂಧ)

ಸಂಶೋಧಕರು

ಎಂ.ಎಸ್. ಸೋಮಶೇಖರಯ್ಯ

ಮಾರ್ಗದರ್ಶಕರು

ಡಾ. ಹರಿಶ್ಚಂದ್ರ ದಿಗ್ಗಂಗಿಕರ್

ಹಿ.ಶ್ರೇ. ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬





ಸಮಾಜ ವಿಜ್ಞಾನ ನಿಕಾಯ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗದ ಹಿ.ಶ್ರೇ. ಅಧ್ಯಾಪಕರಾದ ಡಾ. ಹರಿಶ್ಚಂದ್ರ ದಿಗ್ಸಂಗಿಕರ್ ಅವರ ಮಾರ್ಗದರ್ಶನದಲ್ಲಿ "ತೆಗ್ಗಿನಮಠ ಪರಂಪರೆ" ಎಂಬ ವಿಷಯ ಕುರಿತು ಸಂಶೋಧನೆ ಮಾಡಿದುದರ ಫಲವಾಗಿ ಈ ಕಿರುಪ್ರಬಂಧವನ್ನು ೨೦೦೬–೦೭ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಲಾಗಿದೆ. ಈ ಮೊದಲು ಕಿರು ಪ್ರಬಂಧವನ್ನು ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: ೩೦/೦೭/೦೭
ಸ್ಥಳ: ವಿದ್ಯಾರಣ್ಯ

ಎಂ. ಎಸ್. ಸೋಮಶೇಖರಯ್ಯ
(ಎಂ.ಎಸ್.ಸೋಮಶೇಖರಯ್ಯ)
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

**"ತೆಗ್ಗಿನಮಠದ ಪರಂಪರೆ"** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನ ನಿಕಾಯದ ಜಾನಪದ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ ಎಂ.ಎಸ್. ಸೋಮಶೇಖರಯ್ಯ ಅವರು, ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ:

(ಡಾ. ಹರಿಶ್ಚಂದ್ರ ದಿಗ್ಸಂಗಿಕರ್)

ಮಾರ್ಗದರ್ಶಕರು ಮತ್ತು ಹಿ.ಶ್ರೇ. ಅಧ್ಯಾಪಕರು

ಜಾನಪದ ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

## ಕೃತಜ್ಞತೆಗಳು

**ತೆಗ್ಗಿನಮಠದ ಪರಂಪರೆ** ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಲು ಅವಕಾಶ ಕಲ್ಪಿಸಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಹಾಗೂ ಇಂದಿನ ಪ್ರಭಾರಿ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುವೆ. ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಸಹಕಾರ ನೀಡಿದ ಅದ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್.ಚಂದ್ರಶೇಖರ್ ಹಾಗೂ ಕುಲಸಚಿವರಾದ ಶ್ರೀ, ಮಿ.ಶಂಕರ್. ಈ ಪ್ರಬಂಧವನ್ನು ಸಿದ್ದಪಡಿಸಲು ಮಾರ್ಗದರ್ಶನ ನೀಡಿದ ಡಾ.ಹರಿಶ್ಚಂದ್ರ ದಿಗ್ಸಂಗಿಕರ್ ವಿಭಾಗದ ಮುಖ್ಯಸ್ಥರಾದ ಡಾ.ಹೆಬ್ಬಾಲೆ.ಕೆ.ನಾಗೇಶ್ ಅವರಿಗೂ, ಪ್ರಾಧ್ಯಾಪಕರಾದ ಡಾ.ಮಂಜುನಾಥ ಬೇವಿನಕಟ್ಟಿ, ಡಾ. ಸ.ಚಿ.ರಮೇಶ್, ಅವರಿಗೂ ಹಾಗೂ ಅಂದಿನ ಮುಖ್ಯಸ್ಥರಾಗಿದ್ದ ಡಾ.ಮೊಗಳ್ಳಿ ಗಣೇಶ್, ಅವರಿಗೂ ಮತ್ತು ಡಾ.ಸಿ.ಟಿ.ಗುರುಪ್ರಸಾದ್, ಅವರುಗಳಿಗೆ ಅಲ್ಲದೇ ಈ ಪ್ರಬಂಧ ರಚನೆಗೆ ಎಲ್ಲಾ ರೀತಿಯಿಂದಲೂ ಸಹಾಯ, ಸಹಕಾರ ನೀಡಿದ ಹಿರಿಯ ಉಪನ್ಯಾಸಕರಾದ ಶ್ರೀ,ಎಂ.ಪಿ.ಎಂ. ಶಾಂತವೀರಯ್ಯ ಅವರಿಗೆ ಕೃತಜ್ಞತೆಗಳು.

ನನ್ನ ವಿದ್ಯಾಬ್ಯಾಸಕ್ಕೆ ಸದಾ ಪ್ರೀತಿ ವಾತ್ಸಲ್ಯದಿಂದ ಪ್ರೋತ್ಸಾಹ ನೀಡಿದ ಪೂಜ್ಯಗುರುಗಳಾದ ಶ್ರೀಷ.ಬ್ರ.ಚಂದ್ರಮೌಳೇಶ್ವರ ಶಿವಾಚಾರ್ಯರಿಗೆ ಪೂಜ್ಯ ತಂದೆ, ತಾಯಿಯವರಿಗೂ ಹಾಗೂ ಅಣ್ಣಂದಿರುಗಳಿಗೂ ನನ್ನ ನಮನಗಳು. ಮಕ್ಕಳಾದ ಮಂಜುನಾಥ, ಮಹೇಶ್, ರಾಜೇಶ್ವರಿ, ತೇಜೇಶ್ವರಿ, ನಾಗವೇಣಿ ಹಾಗೂ ಅಭಯ್ ನಂದಿನಿ ಅವರಿಗೂ

ಮುಕ್ತವಾಗಿ ಸಲಹೆ ನೀಡುವುದಲ್ಲದೇ ಛಾಯಚಿತ್ರ ಹಲವಾರು ಮಹಿತಿ ನೀಡಲಿಕ್ಕೆ ಮಾರ್ಗದರ್ಶನ ಮಾಡಿದ ಟಿ.ಎಂ.ಚಂದ್ರಶೇಖರಯ್ಯ ಹಾಗೂ ಎಚ್.ಜಿ.ಎಂ.ಜಯದೇವ, ಜಿ.ಮಲ್ಲಿಕಾರ್ಜುನ ಅವರಿಗೂ ಹಾಗೂ ನನಗೆ ಪ್ರೋತ್ಸಾಹ ನೀಡುತ್ತಿರುವ ಎಸ್.ಯು.ಜೆ.ಎಂ.ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎಸ್. ಬಸವರಾಜ ಹಾಗೂ ಗುರುಗಳಂತಿರುವ ಹಿರಿಯರಾದ ಶ್ರೀಭರತ್‌ಭೂಷಣ್ ಶ್ರೀ ಎಂ.ಶಿವಲಿಂಗಪ್ಪ ಶ್ರೀ ಎಂ.ಪಿ.ಎಂ.ದಯಾನಂದಸ್ವಾಮಿ ಶ್ರೀ ಎ.ಸಿ.ಚಿಕ್ಕಮಠ ಶ್ರೀ ಜಯಪ್ರಕಾಶ್ ಹಾಗೂ ಗ್ರಂಥಗಳನ್ನು ನೀಡಿದ ಗ್ರಂಥಪಾಲಕರಾದ ಶ್ರೀ ಭಗವಂತಗೌಡರು ಮತ್ತು ಎಚ್.ಪಿ.ಎಸ್. ಕಾಲೇಜಿನ ಗ್ರಂಥಪಾಲಕರಾದ ಶ್ರೀ ನಂದಿಗಾವಿ ಅವರಿಗೂ ಹಾಗೂ ಎಲ್ಲಾ ಆತ್ಮೀಯ ಸಹದ್ಯೋಗಿ ಮಿತ್ರರಿಗೆಲ್ಲರಿಗೂ ಕೃತಜ್ಞತೆಗಳು.

ನನಗೆ ಸಂಶೋಧನೆ ಮಾಡುವ ಸಮಯದಲ್ಲಿ ಜೊತೆಗೆ ಬಂದು ಸಹಕರಿಸಿದ ಸ್ನೇಹಿತರಾದ ಡಿ. ಬಸವರಾಜ, ವೀರಪ್ಪ, ಎನ್ ವೀರಭದ್ರಪ್ಪ ಮತ್ತು ಶ್ರೀಮತಿ ರಾಧಾ ಅವರಿಗೂ ವಂದನೆಗಳು ನನ್ನ ಪ್ರಬಂಧ ರಚನೆಗೆ ಗ್ರಂಥಗಳನ್ನು ನೀಡಿ ಸಹಕರಿಸಿದ ಗ್ರಂಥಾಲಯದ ಮುಖ್ಯಸ್ಥರಿಗೂ ಸಿಬ್ಬಂದಿಯವರಾದ ಶ್ರೀ ಕೆ. ಗಣೇಶ್ ಆಚಾರ್ ಹಾಗೂ ಉಳಿದ ಎಲ್ಲಾ ವರ್ಗದವರಿಗೂ ಈ ಸಂಪ್ರಬಂಧವನ್ನು ಪ್ರೀತಿಯಿಂದ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀ ಎಚ್.ಎಂ.ವಿರೂಪಾಕ್ಷಯ್ಯ ಬನ್ನಿಮಟ್ಟಿ ಅವರಿಗೂ ಹಾಗೂ ಶ್ರೀ ಅಬ್ದುಲ್ ನಬಿ ಅವರಿಗೂ ನನ್ನ ಕೃತಜ್ಞತೆಗಳು.

## ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ನಮ್ಮ ದೇಶ ಸನಾತನ ಧರ್ಮಗಳ ತವರೂರು ಇಲ್ಲಿ ಅನೇಕ ಧರ್ಮಗಳು ಉದಯಿಸಿ ತಮ್ಮ ತಮ್ಮ ಧರ್ಮದ ತತ್ವಗಳ ಮೂಲಕ ಜನರನ್ನು ಉದ್ಧಾರ ಮಾಡಿವೆ. ಅವುಗಳಲ್ಲಿ ವೀರಶೈವ ಧರ್ಮವು ಒಂದು. "ಯಾರು ಶೈವ ಮತ ಸಂರಕ್ಷಣೆಗಾಗಿ ತಮ್ಮ ಪ್ರಾಣವನ್ನು ಸಮರ್ಪಿಸಲು ಮುಂದೆ ನುಗ್ಗುವರೋ ಅವರು ಶಿವನ ನಿತ್ಯಾಭಿಯೋಗದಿಂದ ಶಿವಭಕ್ತರೆನಿಸಿಕೊಂಡು ಶಿವಯಜ್ಞವನ್ನು ಆಚರಿಸುವರೆಂದು ವೀರಪದವು ತಿಳಿಸುತ್ತದೆ. ವೀರಶೈವ ಮತವು ಅಹಿಂಸೆಯನ್ನು ಪ್ರಧಾನವಾಗಿ ಬೋಧಿಸಿದೆಯಾದರೂ ಶಿವಲಿಂಗಕ್ಕೆ ಶಿವಯೋಗಿಗಳಿಗೆ ದುಷ್ಟರಿಂದ ಹಿಂಸೆಯಾದಾಗ ಅದನ್ನು ಸಹಿಸಿಕೊಂಡಿರಬಾರದೆಂದು, ಶಕ್ತಿ ಮೀರಿ ದುಷ್ಟರನ್ನು ನಿಗ್ರಹಿಸಬೇಕೆಂದು ವೀರವ್ರತದಿಂದ ಶಿವಭಕ್ತನಿಗೆ ವೀರಶೈವನೆಂಬ ಹೆಸರು ಬಂದಿತೆಂದು ಸಂಶೋಧಕರು ಪ್ರತಿಪಾದಿಸಿದ್ದಾರೆ" [೧]

ಮಾನವ ಜೀವನದಲ್ಲಿ ಅಜ್ಞಾನ ಅಂಧಕಾರ ಕವಿದಾಗ ಅದನ್ನು ನಿವಾರಿಸಿ, ಜ್ಞಾನದ ಬೆಳಕನ್ನು ಹರಡುವ ಕಾರ್ಯ ನಡೆದಿದೆ. "ಧರ್ಮವು ಮಲೀನವಾಗಿ ಅಧರ್ಮ ಹೆಚ್ಚಾದಾಗ ನಾನು ಅವತರಿಸುತ್ತೇನೆ. ಸಂಭವಾಮಿ ಯುಗೇ ಯುಗೇ ಎಂಬ ಗೀತೋಕ್ತಿಯಂತೆ ಅಧರ್ಮವನ್ನು ತುಳಿದು ಧರ್ಮದ ಪ್ರಭಾವದಿಂದ ಹೆಚ್ಚಿನ ಕಾರ್ಯಗಳು ನಡೆಯುತ್ತವೆ. ಅಂತಹ ಧರ್ಮದ ಕಾಯಕಕ್ಕೆ ತಳಪಾಯವನ್ನು ಹಾಕಿಕೊಟ್ಟವುಗಳೆಂದರೆ ಮಠ ಮಾನ್ಯಗಳು

೧೨ನೇ ಶತಮಾನದ ಸಾಮಾಜಿಕ ಚಳುವಳಿಯನ್ನು ಗಮನಿಸಿದಾಗ ಮೇಲ್ನೋಟಕ್ಕೆ ಕಾಣಿಸುವುದು ರಾಜಕೀಯ ನೀತಿಗಳಿಂದ ಸಾಂಪ್ರದಾಯಿಕವಾಗಿ ಒಂದರ್ಥದಲ್ಲಿ ಪ್ರಗತಿಪರ ಬೆಳವಣಿಗೆಯಾದರೂ? ಸಂಕ್ರಾಂತಿ ಸಮಯದಲ್ಲಿ ಅದು ಅತ್ಯಂತ ವಿಷಮವಾಗಿ ಕಂಡುಬಂದಿತು. ಇಂತಹ ಸಂದರ್ಭಗಳಲ್ಲಿ ಮಠಮಾನ್ಯಗಳ ಪಾತ್ರ ಮಹತ್ವದಾಗಿತ್ತು. ಜಾತಿಮತಗಳ ನಡುವಿನ ವೈಷಮ್ಯ ಪ್ರಕಟಗೊಳ್ಳದಂತೆ ಆಧ್ಯಾತ್ಮದ ಸೂತ್ರವನ್ನು ಹಿಡಿದು ಸಾಮಾಜಿಕ ಸ್ವಾಸ್ಥ್ಯದ ಪರಿಸರವನ್ನು ನಿರ್ಮಾಣ ಮಾಡುವ ಬಹು ದೊಡ್ಡ ಕೆಲಸದಲ್ಲಿ ಮಠಮಾನ್ಯಗಳು ನಿರತವಾದವು.[೨] ಉನ್ನತವಾದ ಸ್ಥಾನಮಾನಗಳು ಜಗತ್ತಿನಲ್ಲಿ ಧರ್ಮದಿಂದಲೇ ಮಾನವನಿಗೆ ದೊರಕಬೇಕಾಗಿದೆ. ಆದರೆ ಅವುಗಳ ಅರ್ಥ ವಿವರಣೆಯು ಇಂಥ ಗುರುವರ್ಯರುಗಳಿಂದಲೇ ಆಗಬೇಕಾಗಿರುವುದರಿಂದ ನಾವೆಲ್ಲರೂ ಜಗದ್ಗುರುಗಳ ಕರುಣಕಟಾಕ್ಷಕ್ಕೆ ಸತ್ಪಾತ್ರರಾಗಬೇಕಾಗಿದೆ.

ಇಂಥ ತತ್ವ ಬದ್ಧತೆಯನ್ನು ಹೊಂದಿರುವ ಹಲವಾರು ವೀರಶೈವ ಮಠಗಳು ಕರ್ನಾಟಕ ಮಾತ್ರವಲ್ಲ ಇಡೀ ಭಾರತದಲ್ಲೂ ಸಾಕಷ್ಟಿವೆ. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಮಾಣಬದ್ಧವಾಗಿ ಜನತೆಗೆ ಬೋಧಿಸುತ್ತಾ ಅಲ್ಲಿಯ ಸೂತ್ರಗಳ ತಳಹದಿಯ ಮೇರೆಗೆ ಜೀವನ ನಡೆಸುವಂತೆ ಕರೆ ಕೊಡುವ ಕಾರ್ಯದಲ್ಲಿ ಮಗ್ನವಾಗಿವೆ. ಕ್ರಿಶ. ೧೨ ನೇ ಶತಮಾನದ ವಚನ ಸಾಹಿತ್ಯವು ಇಂತಹ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪುನರ್ ನಿರ್ವಹಿಸಿದವು. ಜನರಾಡುವ ಮಾತಿನಲ್ಲಿ ಸಿದ್ಧಾಂತ ಎಲ್ಲರಿಗೂ ಇಷ್ಟವಾಗುವಂತೆ ಪ್ರತಿಪಾದಿತವಾಯಿತು.

ಅಂದಿನಿಂದ ಅನ್ಯ ಧರ್ಮಿಯರು ಈ ಸಿದ್ಧಾಂತಕ್ಕೆ ಆಕರ್ಷಿತರಾಗಿ ಮತಾಂತರವನ್ನು ಹೊಂದಿದರು ಕನ್ನಡ ಭಾಷೆಯಲ್ಲಿ ಹೇಳಲಾದ ಈ ಸಿದ್ಧಾಂತ ಅತ್ಯಂತ ಸರಳ ನಿರೂಪಣೆಯಿಂದ ಕೂಡಿದೆ. ಹಾಗಾಗಿ ವೀರಶೈವ ಧರ್ಮಕ್ಕೆ ಸಂಸ್ಕೃತಕ್ಕಿದ್ದ ಕೊಂಡಿ ಕಳಚಿ ಇದು ಕನ್ನಡಿಗರ ಧರ್ಮ ಎನ್ನುವಷ್ಟರ ಮಟ್ಟಿಗೆ ಆಚರಣೆಯಲ್ಲಿ ಬಂದಿತು. ಅಂದಿನಿಂದ ಕರ್ನಾಟಕದಲ್ಲಿ ಮಠಗಳ ಸಂಖ್ಯೆ ಅಧಿಕವಾಯಿತು. ಊರಿಗೊಂದರಂತೆ ಮಠಗಳು ಆರಂಭಗೊಂಡವು. ಪಾರಂಪರಿಕವಾದ ಮತ್ತು ವಂಶವಾಹಿನಿಯಿಂದ ನಡೆದು ಬಂದ ಜಂಗಮ ಸಮುದಾಯವು ಇಂತಹ ಸಿದ್ಧಾಂತವನ್ನು ಹೆಚ್ಚು ಹೆಚ್ಚು ಪ್ರಚಾರಮಾಡುವ ಉದ್ದೇಶದಿಂದ ಕಾರ್ಯನಿರತವಾದವು. ಪ್ರತಿ ಹಳ್ಳಿ ಹಳ್ಳಿಗಳಲ್ಲೂ ಓದಿಸುವ ಮಠಗಳು ಆರಂಭಗೊಂಡವು. ಹೈದರಾಬಾದ ಕರ್ನಾಟಕ ಭಾಗದಲ್ಲಿ ಗಾಂವಠಿ ಶಾಲೆಗಳುಆರಂಭಗೊಂಡಾಗ ಅವು ಮಠದಲ್ಲಿಯೇನಡೆಯುತ್ತಿದ್ದವು. ಶಾರ್ವಜನಿಕ ಸರಕಾರಿ ಶಾಲೆಗಳಿಲ್ಲದಿದ್ದಾಗ ಮಠಗಳೇ ಜನರಿಗೆ ಪಾಠವನ್ನು ಕಲಿಸಿವೆ. ಅವುಗಳಲ್ಲಿ ನಿರಂತರವಾಗಿ ಈ ಸಿದ್ಧಾಂತದ ಬೋಧನೆ ನಡೆಯುತ್ತಿತ್ತು. ವೀರಶೈವರ ಕ್ರೀಯಾಚಾರಗಳು ಮತ್ತು ಜ್ಞಾನಾಚಾರಗಳು ಹೇಗಿರಬೇಕೆಂಬ ಬಗೆಗೆ ಅಲ್ಲಿ ಸದಾ ಚರ್ಚೆ ಮತ್ತು ಪ್ರಾಯೋಗಿಕತೆ ನಡೆಯುತ್ತಲೇ ಇತ್ತು• ಇಂಥ ಮಠಗಳಿಂದ ಹರಪನಹಳ್ಳಿಯ ತೆಗ್ಗಿನ ಮಠ ಹೊರತಾಗಿರಲಿಲ್ಲ.

ಬ್ರಿಟಿಷರ ಆಡಳಿತ ಕಾಲದಲ್ಲಿ ಶಿಕ್ಷಣ ಎಲ್ಲಾ ವರ್ಗದವರಿಗೂ ವಿಸ್ತರಣೆಯಾಗಬೇಕೆಂಬ ಆಶಯ ಹೊರಹೊಮ್ಮಿತಾದರೂ ಅದು ವಿಭಿನ್ನ ಸನ್ನಿವೇಶಗಳಲ್ಲಿ ವ್ಯತಿರಿಕ್ತ ಪರಿಣಾಮವನ್ನುಂಟು ಮಾಡಿತು. ಒಂದು ಕಡೆ ಸಾಂಪ್ರದಾಯಿಕ ಜ್ಞಾನ ಶಿಸ್ತುಗಳು ಮತ್ತೊಂದು ಕಡೆ ಪಾಶ್ಚಿಮಾತ್ಯ ಶಿಕ್ಷಣ ವ್ಯವಸ್ಥೆಗಳು ಈ ಎರಡರ ನಡುವೆ ಸಂಘರ್ಷಗಳು ಭುಗಿಲೆದ್ದವು. ಸಂಸ್ಕೃತ ಶಿಕ್ಷಣ ಒಂದು ವರ್ಗದ ಸ್ವತ್ತಾಗಿದ್ದರಿಂದ ಅದನ್ನು ನಿರಾಕರಿಸಿ, ಇಂಗ್ಲೀಷ್ ಶಿಕ್ಷಣ ಪ್ರತಿಸ್ಥಾಪಿತವಾಯಿತು. ಸಂಸ್ಕೃತ ಶಿಕ್ಷಣ ನಶಿಸಿ, ಇಂಗ್ಲೀಷ್ ಶಿಕ್ಷಣ ಬೆಳವಣಿಗೆ ಹೊಂದಲು ಪ್ರಾರಂಭಿಸಿತು. ಸಾಂಪ್ರದಾಯಿಕ ಸಂಸ್ಕೃತ ಶಿಕ್ಷಣವನ್ನು ಅಪೇಕ್ಷಿಸುವ ಆ ವರ್ಗ ಜಾಗೃತಗೊಂಡು ಇಂಗ್ಲೀಷ್ ಶಿಕ್ಷಣವನ್ನು ತನ್ನದಾಗಿಸಿಕೊಳ್ಳುವ ಹುನ್ನಾರ ನಡೆಸಿತು. ಇಂಗ್ಲೀಷ್ ಭವಿಷ್ಯದ ಭಾಷೆಯೆಂದು ಅದು ಬಗೆಯಿತು ಕಳೆದ ಶತಮಾನದ ಸಾಮಾಜಿಕ ಚಳುವಳಿಗಳು ಈ ಹಿನ್ನೆಲೆಯಲ್ಲಿ ನಡೆದವು ಎಂದು ಹೇಳಲಿಕ್ಕಾಗದು. ಅದಕ್ಕೆ ಬೇರೆ ಬೇರೆ ಆಯಾಮಗಳಿದ್ದವು ರಾಜಕೀಯ ಮತ್ತು ಜಾತೀಯ ಸಂಘಟನೆಗಳು ಬಹು ಮುಖ್ಯವಾದ ಪಾತ್ರವನ್ನು ಪಡೆದುಕೊಂಡವು.

ಸಂವಿಧಾನ ತಜ್ಞರಿಗೆ ಸಂವಿದಾನ ರಚನೆ ಮಾಡುವ ಸಂದರ್ಭದಲ್ಲಿ ಎದುರಾದದ್ದು ಇಂತಹ ಸಮಸ್ಯೆಗಳೇ ಭಾರತ ಸಂವಿಧಾನವನ್ನು ಯಾವ ನೆಲೆಗಟ್ಟಿನ ಮೇಲೆ ಕಟ್ಟಬೇಕೆಂಬ ಚರ್ಚೆಗಳು ನಡೆಯುತ್ತಿದ್ದಾಗಲೇ ಧಾರ್ಮಿಕ ಕಟ್ಟುಪಾಡುಗಳು ಸಾಮಾಜಿಕ ಆಚರಣೆಗಳು ಸಮಸ್ಯೆಗಳಾಗಿ ತಲೆದೋರಿದವು.

ಭವಿಷ್ಯದ ಸಾಮರಸ್ಯ ಭಾರತಕ್ಕಾಗಿ ರಾಜ್ಯ ನೀತಿ ನಿರ್ದೇಶಕ ತತ್ವಗಳೆಂಬ ಸಾಮರಸ್ಯ ಸೂತ್ರಗಳನ್ನು ಅದರಲ್ಲಿ ಅಳವಡಿಸಿದರು. ಸ್ವತಂತ್ರ ಭಾರತ ತನ್ನದೇಯಾದ ಒಂದು ಸಂವಿಧಾನವನ್ನು ಡಾ. ಅಂಬೇಡ್ಕರ್ ನೇತೃತ್ವದಲ್ಲಿ ರೂಪಿಸಿಕೊಂಡಿತು. ಆ ಪ್ರಕಾರ ಮಠಗಳಲ್ಲಿ ಶಿಕ್ಷಣ ನೀಡುವ ನಂತರ ಸರಕಾರದಿಂದ ಸಾರ್ವಜನಿಕವಾಗಿ ಪ್ರಜಾಪ್ರಭುತ್ವದಲ್ಲಿ ಎಲ್ಲಾ ಮಕ್ಕಳಿಗೂ ಶಿಕ್ಷಣ ಕಡ್ಡಾಯವಾಯಿತು. ಮುಕ್ತವಾತಾವರಣದಲ್ಲಿ ಶಾಲೆಗಳು ಸರಕಾರದ ವ್ಯಾಪ್ತಿಯಲ್ಲಿ ಬಂದವು.ಕೆಲಸ ಕಡಿಮೆಯಾಯಿತು.

೧. ಕಡ್ಡಾಯ ಶಿಕ್ಷಣ

೨. ಏಕರೂಪ ನಾಗರಿಕ ಸಂಹಿತೆ

೩. ಖಾದಿ ಮತ್ತು ಗ್ರಾಮದ್ಯೋಗ

೪. ಪಾನನಿರೋಧ

ಸಾರ್ವತ್ರಿಕವಾಗಿ ಅನ್ವಯವಾಗುವಂತೆ ಸಂವಿಧಾನದಲ್ಲಿ ನಿಯುಕ್ತಿಗೊಳಿಸಿದರು ಭವಿಷ್ಯದಲ್ಲಿ ಸಾಮರಸ್ಯದ

ನಾಡನ್ನು ನಿರ್ಮಾಣ ಮಾಡುವ ತಜ್ಞರ ಕನಸು ಕೂಡಾ ಇದಾಗಿತ್ತು. "ಹಾಗೆಯೇ ಉತ್ತರ ಕರ್ನಾಟಕ ಬರ ಪ್ರದೇಶವೆಂದೇ ಖ್ಯಾತವಾಗಿರುವ ಬಳ್ಳಾರಿ ರಾಯಚೂರು, ಕೊಪ್ಪಳ, ಹಾವೇರಿ, ಬೀದರ್, ಗುಲ್ಬರ್ಗಾ, ಧಾರವಾಡ ಜಿಲ್ಲೆಗಳು ಎಂದೂ ಸಮೃದ್ಧಿಯನ್ನು ಸಾಧಿಸಲಾರವು ಅಲ್ಲಿಗೆ ಸರ್ಕಾರದ ಯಾವುದೇ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿ ತಲುಪುತ್ತಿಲ್ಲ. ಶೈಕ್ಷಣಿಕ ಸ್ಥಿತಿಗಳಂತೂ ತೀರಾ ಶೋಚನೀಯ. ಬಡತನ, ನಿರುದ್ಯೋಗ, ದಾರಿದ್ರ್ಯ, ಅನಕ್ಷರತೆ, ಸಾಮಾಜಿಕ ಅಸಮಾನತೆ ಮುಂತಾದ ವಿಸಂಗತಿಗಳಲ್ಲಿ ಅಲ್ಲಿನ ಜನತೆ ಕಂಗಾಲಾಗಿದೆ. ಸ್ವಾತಂತ್ರ್ಯ ನಂತರ ಆರೇಳು ದಶಕಗಳಲ್ಲಿ ಈ ಜಿಲ್ಲೆಗಳು ಕಂಡುಕೊಂಡ ಅಭಿವೃದ್ಧಿಯು ಮರಿಚೀಕೆಯಾಗಿದೆ. ತುಂಗಭದ್ರಾ, ಕೃಷ್ಣಾ, ನದಿಗಳು ತಮ್ಮ ಪಾತ್ರವನ್ನು ಬಿಟ್ಟು ಒಪ್ಪಂದಗಳ ಪ್ರಕಾರ ಹರಿದು ಹೋಗುತ್ತಿವೆ. ಇದು ಇಲ್ಲಿಯ ಜನತೆಯ ದುರದೃಷ್ಟಕರ. ಇಂತಹ ಸ್ಥಿತಿಯಲ್ಲಿಯೂ ಉತ್ತರ ಕರ್ನಾಟಕದ ಬಹುಭಾಗ ಆಧ್ಯಾತ್ಮಿಕ ಮಹತ್ವವನ್ನು ಸಾಧಿಸಿಕೊಂಡಿದೆ. ಮನುಷ್ಯನಿಗೆ ಸುಖಾನುಭವದ ಕಲ್ಪನೆ ಬೇರೆ ಬೇರೆಯಾಗಿರುತ್ತದೆ ಅದು ಅವನ ಅಂತರಂಗಕ್ಕೆ ಸಂಬಂಧಪಟ್ಟದ್ದು ಇದರ ಆಧ್ಯಾತ್ಮಿಕ ಸುಖಾನುಭವಕ್ಕೆ ಅಲ್ಲಿರುವ ಮಠಮಾನ್ಯಗಳೇ ಆಧಾರ ಇದರಿಂದಾಗಿ ಉತ್ತರ ಕರ್ನಾಟಕದ ಜನತೆ ತಮ್ಮ ಬದುಕನ್ನು ಸಾಕ್ಷತ್ಕರಿಸಿಕೊಳ್ಳುವುದು ಮಠಮಾನ್ಯಗಳ ಮೂಲಕವಾಗಿಯೇ ಎಂದು ಬೇರೆ ಹೇಳಬೇಕಾಗಿಲ್ಲ. ಮಠಗಳನ್ನು ಹೊರತಾಗಿ ಅವರ ಬದುಕೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಅವರ ಮತ್ತು ಮಠಗಳ ಅನುಭೂತಿತನ ಶೈಕ್ಷಣಿಕವಾಗಿ, ಸಾಮಾಜಿಕವಗಿ, ಆಧ್ಯಾತ್ಮಿಕವಾಗಿ ಮಠವನ್ನೇ ಅವರು ಅವಲಂಭಿಸಿಕೊಂಡಿದ್ದರು.[೩]

ಹರಪನಹಳ್ಳಿ ಪಟ್ಟಣವು ಮೊದಲು ಮದ್ರಾಸ್ ಪ್ರಾಂತಕ್ಕೆ ಒಳಪಟ್ಟಿತ್ತು. ಆದರೆ ಕರ್ನಾಟಕದ ಆಡಳಿತ ದೃಷ್ಟಿಯಿಂದ ಹರಪನಹಳ್ಳಿಯನ್ನು ಹೈದ್ರಾಬಾದ್ ಕರ್ನಾಟಕಕ್ಕೆ ಸೇರಿಸಲಾಯಿತು. ಅಂದು ಹೈದ್ರಾಬಾದ್ ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯ ಸೆರಗಂಚಿನಲ್ಲಿದ್ದ ಹರಪನಹಳ್ಳಿ ತಾಲೂಕು ಕೇಂದ್ರವಾಗಿತ್ತು. ನವಜಿಲ್ಲೆಗಳು ನಿರ್ಮಾಣವಾದ ಮೇಲೆ ಅದರಲ್ಲಿ ಒಂದಾದ (ಇಂದು) ಮಧ್ಯ ಕರ್ನಾಟಕದ ದಾವಣಗೆರೆ ಜಿಲ್ಲೆಗೆ ಸೇರಿತು. ಇದಕ್ಕೆ ಹರಪುರ (ಹರಿಪುರ) ಎಂದು ಪದನಾಮ ಇತ್ತು. ವಿಜಯನಗರ ಕಾಲದ ಪ್ರೌಢದೇವರಾಯನ ಕಾಲಕ್ಕೆ ನೂರೊಂದು ವಿರಕ್ತರು ವೀರಶೈವ ಧರ್ಮಪ್ರಸಾರ ಮಾಡುತ್ತಾ ಬಂದಾಗ ಐವರ ಪಂಚಗಣಾದೀಶ್ವರರಲ್ಲಿ ಮೂವರು (ಹರಪುರ ಪ್ರದೇಶದಲ್ಲಿ) ಅಂದರೆ

೧. ಮದ್ದಾನಸ್ವಾಮಿ

೨. ಕೋಲಶಾಂತೇಶ್ವರ

೩. ಕೆಂಪಯ್ಯ

ಈಮೂವರು ಗಣಾಧೀಶ್ವರರು "ಹರಪುರ ತಾಲೂಕ ಪ್ರದೇಶವನ್ನು ಕರ್ಮಭೂಮಿಯನ್ನಾಗಿ ಮಾಡಿಕೊಂಡು ಧರ್ಮ ಕಾರ್ಯವೆಸಗಿ ಪ್ರಸಿದ್ಧಿ ಪಡೆದರು. ಹರಪನಹಳ್ಳಿ ಕೆಂಪಯ್ಯನ ವಾಸಸ್ಥಾನವು ಹೌದು ಈ ದೇವಸ್ಥಾನ ಜೊತೆಗೆ ಗರ್ಭಗುಡಿಯ ಹಿಂದೆ ದಾಸೋಹ ನಡೆಸುವ ಸ್ಥಳವು ಇದೆ." ಈ ದೇವಸ್ಥಾನಕ್ಕೆ ಹೋಗುವ ರಸ್ತೆ ಎಡ ಬಲದಲ್ಲಿಯೇ ಹೋಗುವ ದಾರಿಯ ಪಕ್ಕದಲ್ಲಿಯೇ ತೆಗ್ಗಿನ ಮಠವಿದೆ ಇದು ಮೊದಲಿನಿಂದಲೂ ತೆಗ್ಗಿನಲ್ಲಿಯೇ ಇರುವುದರಿಂದ ಇದಕ್ಕೆ ತೆಗ್ಗಿನ ಮಠ (ದಾಸೋಹ, ಹಿರೇಮಠ) ಎಂದೂ ಪ್ರತೀತಿ ಇದೆ. ಇದರ ಪೂರ್ವನಾಮ ಹಿರೇಮಠ (ದಾಸೋಹ ಮಠ) ಎಂದು ಕರೆಯುವ ವಾಡಿಕೆ ಇದೆ. ಹರಪುರ ಊರು ಮೊದಲು ಹಳ್ಳಿಯ ಹಾಗೆ ಇತ್ತು ಎಂದು ತಿಳಿಯುತ್ತದೆ. ಕಾಲಬದಲಾದಂತೆ ಗ್ರಾಮಗಳು ಪಟ್ಟಣ ಅಥವಾ ಹೋಬಳಿಗಳಾಗುತ್ತಿರುವುದು ಸಾಮಾನ್ಯ ಸಂಗತಿ.

ಇಲ್ಲಿ ಆಳ್ವಿಕೆ ಮಾಡಿರುವ ೧೫೫೭ ರಿಂದ ೧೮೨೦ ರವರೆಗಿನ ಪಾಳೆಗಾರರಿಗೆ ಆಡಳಿತ ವೈಖರಿಗೆ ಮಠದ ಧರ್ಮ ಶಾಸನವೇ ಅಂತಿಮವಾಗಿತ್ತು. ರಾಜಸೋಮಶೇಖರ ನಾಯಕನು ಕೋಟೆ ಕೊತ್ತಲುಗಳ ನಿರ್ಮಾಣದ ಜೊತೆಗೆ ವೀರಭದ್ರೇಶ್ವರ ಮತ್ತು ಕಾಳಮ್ಮನ ದೇವಸ್ಥಾನಗಳನ್ನು ಪ್ರತಿಷ್ಠಾಪಿಸಿದನೆಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ ಹಾಗೂ ರಾಜ್ಯಭಾರ ನಡೆಸುತ್ತಾ ಮಠದ ಗುರುಗಳ ಕೃಪಾಶೀರ್ವಾದ ಪಡೆದುಕೊಳ್ಳುತ್ತಾ ಅವರ ಪ್ರೀತಿಗೆ ಪಾತ್ರವಾಗುವದಷ್ಟೇ ಅಲ್ಲದೇ ಹರಪುರ ಎಲ್ಲಿದೆ, ಹೇಗಿದೆ, ಎನ್ನುವುದಕ್ಕೆ ಇತಿಹಾಸದಲ್ಲಿ ಈ ಹೆಸರು ಅಜರಾಮಜರವಾಗಿ ಉಳಿಯಲಿಕ್ಕೆ ಶಿವಾಚಾರ್ಯರ ಜೊತೆಗೆ ರಾಜನೂ ಕಾರಣೀಭೂತನಾಗಿದ್ದಾನೆ. ಹರಪನಹಳ್ಳಿ ಮೊದಲು ಚಿಕ್ಕ ಹಳ್ಳಿಯಂತೆ ಇದ್ದಿತು. ಆದರೆ ಈಗ ಅತ್ತ ನಗರವೂ ಅಲ್ಲ ಇತ್ತ ಹಳ್ಳಿಯೂ ಆಗಿರದೇ ಈಗ ಹರಪುರವು ಪಟ್ಟಣದಂತೆ ಬೃಹದಾಕಾರವಾಗಿ ಬೆಳೆದು ವಿಜ್ರಂಬಿಸುತ್ತದೆ.

ಈಗ ಪಟ್ಟಣವಾಗಿ ಬೆಳೆದು ನಿಲ್ಲಲಿಕ್ಕೆ ವರ್ತಮಾನದಲ್ಲಿ ಕಾರಣೀಭೂತರಾದವರೇ ಈ ಪಟ್ಟಣ ಮಧ್ಯ ಪ್ರಜ್ವಲಿಸುವ ಮಠದ ಪೂಜ್ಯರೇ ಕಾರಣವೆಂದು ತಿಳಿದು ಬರುತ್ತದೆ. ಈ ಮಹಾನ್ ಪುರುಷರ ಬಗ್ಗೆ ಹರಪನಹಳ್ಳಿ ಜನತೆಗೆ ಇವರ ಬಗ್ಗೆ ಪ್ರೀತಿ ವಿಶ್ವಾಸ ನಂಬಿಕೆ ಹೆಚ್ಚು ಆದ್ದರಿಂದ ಇವರನ್ನು ಹರಪನಹಳ್ಳಿಯವರಷ್ಟೇ ಅಲ್ಲದೇ ಸುತ್ತ ಮುತ್ತಲಿನ ಹಲವಾರು ಗ್ರಾಮಗಳ ಜನರು ಜಾತಿ, ಮತ, ಪಂಥ, ಬಡವ–ಬಲ್ಲಿದ ಎನ್ನದೇ ಎಲ್ಲಾ ಭಕ್ತರು ಬಂದು ಪೂಜ್ಯರ ಆಶೀರ್ವಾದ ಪಡೆದುಕೊಳ್ಳುತ್ತಾರೆ. ತಮ್ಮ ಕಷ್ಟ ನಷ್ಟಗಳನ್ನು ಪರಿಹರಿಸುವ ರೂಪದಲ್ಲಿ ಪೂಜ್ಯರು ಅವತರಿಸಿದರು ಎಂಬ ವಿಶ್ವಾಸ ಜನರಲ್ಲಿದೆ.

ಮಠಗಳ ಪರಿಕಲ್ಪನೆ ಭಾರತೀಯರಲ್ಲಿ ತುಂಬಾ ಹಳೆಯದು, ಮಠಗಳು ಸನ್ಯಾಸಿಗಳ ಮುನಿಗಳ ವಾಸಸ್ಥಾನ ಜ್ಞಾನದ, ದೀಕ್ಷಾಸ್ಥಾನ ಹಲವಾರು ಸನಾತನ ಶಾಸ್ತ್ರ ಶಿಸ್ತುಗಳು ಅಧ್ಯಯನದ ಕೇಂದ್ರಗಳು ವೈದಿಕ ದೇವಾಲಯಗಳಂತೆ ಮಠಗಳು ದೇವಸ್ಥಾನಗಳಲ್ಲಿ  ಅವು ವಿದ್ಯೆಯ ಜ್ಞಾನದ ವೈಚಾರಿಕತೆಯ ಚಿಂತನೆಯ ವೇದಗಳು, ಸಮಾಜದ ಸಮಷ್ಠಿಯ ಬಗೆಗಿನ ತಾತ್ವಿಕ ಚರ್ಚೆಗಳು, ಉಪನ್ಯಾಸಗಳು ಪ್ರವಚನಗಳು, ಪುರಾಣ ಪಠಣ ಮುಂತಾದವುಗಳ ಚಟುವಟಿಕೆಗಳ ಕ್ರಿಯಾಶೀಲ ಶಕ್ತಿ ಕೇಂದ್ರಗಳು, ಇತಿಹಾಸದ ಕಣ್ಣಲ್ಲಿ ಅವು ತೀರಾ ಅನುಪಲಬ್ಧವಾಗಿವೆ ಇದಕ್ಕೆ ಬೇರೆ ಬೇರೆ ಕಾರಣಗಳಿರಬಹುದು ಭಾರತೀಯರಲ್ಲಿದ್ದ ಇತಿಹಾಸದ ಅವಜ್ಞೆಗೆ ಇವು ಗುರಿಯಾಗಿವೆ. ಒಂದು ವರ್ಗದ ಷಡ್ಯಂತ್ರಕ್ಕೆ ಗುರಿಯಾಗಿ ಮಠ ಮಾನ್ಯಗಳು ಚರಿತ್ರೆಯ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಂಡಿಲ್ಲ. ಅಂದ ಮಾತ್ರಕ್ಕೆ ಅವು ಇರಲಿಲ್ಲವೆಂದಲ್ಲ ಮಧ್ಯಯುಗೀನ ಭಾರತೀಯ ಚರಿತ್ರಾರಂಭದಿಂದ ಮಠಗಳ ಪಾತ್ರ ಸಮಾಜದಲ್ಲಿ ಹಿರಿದಾಗಿತ್ತು ಎಂಬುದಂತೂ ಸತ್ಯ. ಇದಕ್ಕೆ ನಮ್ಮ ಚರಿತ್ರೆಯಲ್ಲಿ ಹಲವಾರು ಪ್ರಮಾಣಗಳು ಸಿಗುತ್ತವೆ.

ವಾಸ್ತವವಾಗಿ ಮಠಗಳ ಪರಿಕಲ್ಪನೆ ಬೌದ್ಧಮತ ಸಂಬಂಧಿಯಾದದ್ದು, ಮಠಗಳೆಂದರೆ ಸನ್ಯಾಸಿಗಳು ವಾಸಮಾಡುವ ಸ್ಥಳವೆಂದು ಅರ್ಥ. ಸನ್ಯಾಸ ಜೀವನಕ್ಕೂ ಮಠಗಳಿಗೂ ನಿಕಟವಾದ ಸಂಬಂಧವಿದೆ ಒಬ್ಬ ವ್ಯಕ್ತಿ ಸನ್ಯಾಸಿಯಾಗುವಾಗ ಆತನ ನಂಬಿಕೆ ಹಾಗೂ ಜೀವನದ ಘಟನೆಗಳು ಕಾರಣವಾಗುತ್ತವೆ. ಭಾರತೀಯರ ಜೀವನ ಪದ್ಧತಿಯಲ್ಲಿ ಎರಡು ಮಾರ್ಗಗಳನ್ನು ಸ್ಥೂಲವಾಗಿ ಕಾಣಬಹುದು. ಒಂದು ಪ್ರವೃತ್ತಿ ಮಾರ್ಗ, ಇನ್ನೊಂದು ನಿವೃತ್ತಿ ಮಾರ್ಗ, ಪ್ರವೃತ್ತಿ ಮಾರ್ಗವು ಲೌಕಿಕ ಹಾಗೂ ಸಾಂಸಾರಿಕವಾದದ್ದು, ನಿವೃತ್ತಿ ಮಾರ್ಗ ಸನ್ಯಾಸಿಪರವಾದದ್ದು ಪಾರಮಾರ್ಥಿಕವಾದದ್ದು. ಒಂದು ಲೌಕಿಕ ಮತ್ತೊಂದು ಅಲೌಕಿಕ. (ಜಾಬಾಲಾ ಮಹರ್ಷಿಗಳು ಅಲೌಕಿಕವಾದದ್ದೇ ಧರ್ಮವಾಗಿದೆ)

ಸಮಾಜಕ್ಕೆ ಸ್ವಾಸ್ಥ್ಯವನ್ನು ತಂದುಕೊಡುವ ನಿಟ್ಟಿನಲ್ಲಿ ಮಠಗಳ ಪಾತ್ರ ಗಣನೀಯವಾದದ್ದು ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿಯುತ್ತಿರುವ ಕರ್ನಾಟಕದ ಮಠಗಳಲ್ಲಿ ಹರಪನಹಳ್ಳಿಯ ತೆಗ್ಗಿನಮಠವು ಒಂದು. ಈ ಮಠವು ಸಮಾಜಕ್ಕೆ ಜ್ಞಾನವನ್ನು ನೀಡುವ ಹಿನ್ನೆಲೆಯಲ್ಲಿ ಹರಪನಹಳ್ಳಿಯಲ್ಲಿ ಸ್ಥಾಪಿಸಿರುವ ಶಾಲಾಕಾಲೇಜುಗಳು ಹಾಗೂ ಇತರ ಕಾರ್ಯಕ್ರಮಗಳು ಹರಪನಹಳ್ಳಿಯನ್ನು ಒಂದು ಪ್ರಮುಖ ಜನಪರ ಕೇಂದ್ರವನ್ನಾಗಿ ಮಾಡಿವೆ. ಇಂತಹ ಅನುಕೂಲಕರ ಕೆಲಸವನ್ನು ನಿರ್ವಹಿಸುವ

ಹರಪನಹಳ್ಳಿ ತೆಗ್ಗಿನಮಠದ ಬಗೆಗೆ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಈ ಅಧ್ಯಯನಕ್ಕೆ ಪ್ರಸ್ತುತದಲ್ಲಿ ಹರಪನಹಳ್ಳಿ ತೆಗ್ಗಿನಮಠ ನಡೆಸುತ್ತಿರುವ ಸಮಾಜಮುಖಿ ಕಾರ್ಯಕ್ರಮಗಳನ್ನು ಇಟ್ಟುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹರಪನಹಳ್ಳಿ ತೆಗ್ಗಿನಮಠದ ಶಾಖಾಮಠ ಹಾಗೂ ಬೇರೆ ಬೇರೆ ಸ್ಥಳಗಳಲ್ಲಿರುವ ಶಿಕ್ಷಣ ಸಂಸ್ಥೆಗಳನ್ನು ಅಧ್ಯಯನಲ್ಲಿ ಹೆಸರಿಸಿದ್ದರೂ ಸಹ ಅವುಗಳ ಸಂಪೂರ್ಣ ಅಧ್ಯಯನವನ್ನು ಮಾಡಿಲ್ಲ ಅಂದರೆ ಈ ಅಧ್ಯಯನವು ಕೇವಲ ಹರಪನಹಳ್ಳಿಯಲ್ಲಿರುವ ತೆಗ್ಗಿನಮಠಕ್ಕೆ ಮಾತ್ರ ಸಂಬಂಧಪಟ್ಟುದುದಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಎರಡು ರೀತಿಯ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ೧). ಹರಪನಹಳ್ಳಿ ತೆಗ್ಗಿನಮಠದ ಬಗೆಗೆ ಮೌಖಿಕವಾಗಿ ಇರುವ ಹಾಡು, ಕಥೆ, ಗಾದೆ, ಐತಿಹ್ಯ ಹಾಗೂ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಜನಪದರಿಂದ ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ೨). ಹರಪನಹಳ್ಳಿ ತೆಗ್ಗಿನಮಠದ ಬಗ್ಗೆ ಇರುವ ಲಿಖಿತದಾಖಲೆಗಳು, ಶಾಸನಗಳು, ಅಭಿನಂದನಾ ಗ್ರಂಥಗಳು, ಸಂಸ್ಮರಣಾಸಂಚಿಕೆಗಳು, ಗೌರವಗ್ರಂಥಗಳು, ದಿನಪತ್ರಿಕೆಗಳು, ಲಿಖಿತ ಇತರ ಪ್ರಕಟಣೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ಟಿಪ್ಪಣಿಗಳು

೧. ಕರ್ತಾರನ ಕ್ರಾಂತದೃಷ್ಟಿ : ಪುಟ – ೩.
೨. ಕರ್ತಾರನ ಕ್ರಾಂತದೃಷ್ಟಿ : ಪುಟ –೧೦.
೩. ಕರ್ತಾರನ ಕ್ರಾಂತದೃಷ್ಟಿ : ಪುಟ –೩೦.
೪. ಜ್ಞಾನ ದೀವಟಿಗೆ : ಪುಟ –೩೨.

# ಅಧ್ಯಾಯ ೨

# ಹರಪನಹಳ್ಳಿ ಚಾರಿತ್ರಿಕ ನೋಟ

ಜನಪದ ಗಾದೆಯ ಪ್ರಕಾರ "ಹರಪನಹಳ್ಳಿ ಹರವು" ಎಂಬಂತೆ ಇಲ್ಲಿಯ ಜನರು ವಿಶಾಲ ಮನೋಭಾವದವರು ವಿಶ್ವಮಾನವತೆಯನ್ನು ಸಾರುವಂಥವರು ಎಂದು ವರ್ಣಿಸಲಾಗಿದೆ. ಇಲ್ಲಿನ ಭಗೋಳಿಕ ಪರಿಸರ ಫಲವತ್ತತೆಯಿಂದ ಕೂಡಿದ ಹಾಗು ಮರಳು ಮಿಶ್ರಿತ ಕಪ್ಪು ಕೆಂಪು ಜೇಡಿ ಮಣ್ಣಿನಿಂದ ಕೂಡಿದ್ದು ಬೆಟ್ಟ ಗುಡ್ಡಗಳ ಆಗರವಾಗಿದೆ. ಇದರ ವಿಸ್ತೀರ್ಣ ೧೪೨೩ ಚದರ್ ಕಿಲೋಮೀಟರ್ ೧,೪೫,೭೧೪ ಬಳ್ಳಾರಿಗೆ ಬರ ಬಂದರೂ ಹರಪನಹಳ್ಳಿಗೆ ಹರಡದು ಎಂಬ ನಂಬಿಕೆ ಇದೆ. ಈ ಜಿಲ್ಲೆಯು ಎತ್ತರವಾದ ಸ್ಥಳವಾಗಿದ್ದು, ಮಳೆಯನ್ನು ಆಕರ್ಷಿಸುತ್ತದೆ. ಹಾಗೂ ಹರಪನಹಳ್ಳಿ ತಾಲೂಕು ಪ್ರದೇಶವಾಗಿರುವುದರ ಜೊತೆಗೆ ಹಲವಾರು ವಾಣಿಜ್ಯಕ್ಕೂ ಹೆಸರು ವಾಸಿಯಾಗಿರುವುದರಿಂದಲೂ ಸುತ್ತಮುತ್ತಲಿನ ಹಳ್ಳಿಗಳಿಗೂ ಎಲ್ಲಾ ದೃಷ್ಟಿಯಿಂದ ಪ್ರಮುಖವಾದ ಕೇಂದ್ರ ಸ್ಥಳವಾಗಿದೆ. ಹಿಂದಿನ ಪಾಳೆಗಾರರ ಆಡಳಿತ ಕಾಲದಲ್ಲಿ ಈ ಊರಲ್ಲಿ ರಾಜ ಸೋಮಶೇಖರನ ಕಾಲದಲ್ಲಿ ದೇವಸ್ಥಾನ ಮತ್ತು ಕೆರೆಗಳನ್ನು ನಿರ್ಮಿಸಿದರು. ಎಂದು ಹಲವಾರು ಶಾಸನಗಳು ಮತ್ತು ಪತ್ರಗಳಲ್ಲಿ ಉಲ್ಲೇಖವಿರುವುದು ಕಂಡು ಬರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ರಾಜಕೀಯವಾಗಿ, ಧಾರ್ಮಿಕವಾಗಿ ಶೈಕ್ಷಣಿಕವಾಗಿ ಮುಂದುವರಿದ ಪ್ರದೇಶವೆಂದು ಗೋಚರವಾಗುತ್ತದೆ.

ಇಂದಿನ ಕಾಲದಲ್ಲಿ ತಮ್ಮದೇ ಆದ ಆಡಳಿತಾತ್ಮಕವಾಗಿ ,ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ವ್ಯವಹಾರಿಕವಾಗಿ, ಜಾನಪದೀಯವಾಗಿ, ತನ್ನದೇ ಆದ ಸ್ಥಾನಮಾನಗಳನ್ನು ಉಳಿಸಿಕೊಂಡು ಬಂದಿದೆ. ಈ ಭಾಗವು ಪಾಳೆಗಾರರ ಆಳ್ವಿಕೆ ಕಾಲದಲ್ಲಿ ಕೆರೆ-ಕೋಟೆ-ಕೊತ್ತಲುಗಳನ್ನು ನಿರ್ಮಿಸಿದರು. ಹಾಗೂ ಈ ಊರಿನ ಜನರ ಉದ್ಯೋಗ ಕೃಷಿ ಪ್ರಧಾನವಾಗಿರುವುದರ ಜೊತೆಗೆ ಇದು ತಾಲೂಕು ಕೇಂದ್ರವಾಗಿದ್ದರಿಂದ ಹಲವಾರು ಕೋರ್ಟು ಕಛೇರಿಗಳು ಶಾಲಾ ಕಾಲೇಜುಗಳು, ಇಲ್ಲಿಯೇ ಇರುವುದರಿಂದ ಹಲವಾರು ನೌಕರಸ್ಥರು ಇರುವುದರಿಂದ ಈ ಹರಪುರ ಆರ್ಥಿಕವಾಗಿ ಸಬಲವಾಗಲಿಕ್ಕೆ ಕಾರಣವಾಯಿತು.

## ೨.೧ ಪದನಿಷ್ಪತ್ತಿ

ಹರಪನಹಳ್ಳಿಯನ್ನು ಹರಪ < ಹರಪ್ಪ + ಹಳ್ಳಿ ಎಂದು ಬಿಡಿಸಬಹುದು.

ಹರಪ್ಪ=ಶಿವಪ್ಪ, ಈಶ್ವರಪ್ಪ, ಬಸಪ್ಪ >ಬಸಪ್ಪ ಆದಂತೆ ಶಿವನಹಳ್ಳಿ ಶಿವಪುರ ಈಗ ಹರಪನಹಳ್ಳಿ ಎಂದಾಗಿದೆ. [೧]

"ಹರಪನಹಳ್ಳಿಗೆ ಹರಿಯಪ್ಪನಹಳ್ಳಿ, ಹರಿಗನಹಳ್ಳಿ ಹರಿಗನಕಟ್ಟೆ ಎಂದು ಕರೆದಿರಬೇಕು ಹರಪನಹಳ್ಳಿ ಪೂರ್ವ ದಿಕ್ಕಿಗೆ ಹೊಂಬಳಗಟ್ಟೆ ಇದ್ದರೆ ಪಶ್ಚಿಮಕ್ಕೆ ಹುಲಿಕಟ್ಟೆ ಇದೆ.ಇವುಗಳು "ಹ"ಕಾರದ ಅಕ್ಷರಗಳಿಂದಾರಂಭವಾಗುವ ಹೆಸರುಗಳ ಹಳ್ಳಿಗಳಾಗಿವೆ.

ಕೋಗಳಿ ಶಿವಕೋಟ್ಯಾಚಾರ್ಯರು ರಚಿಸಿದ"ವಡ್ಡಾರಾದನೆ"ಗದ್ಯ ಸಂಕಲನದ ಸುಕುಮಾರಸ್ವಾಮಿ ಕಥೆಯಲ್ಲಿ "ಹರಿಪುರ" ಎಂಬ ಪೊಳಲೋಳ್ ಎಂದಿದೆ. ಚಿತ್ರದುರ್ಗ ತಾಲೂಕಿನ ಹರಿಹರಕ್ಕೂ ಪ್ರಾಚೀನ ಕಾಲದಲ್ಲಿ ಹರಿಪುರಿ ಎಂದು ಕರೆದಿರುವರು. ಆದರೆ ಕೋಗಳಿಗೆ ಸಮೀಪವಿರುವ ಹಳ್ಳಿ ಹರಿಗನಕಟ್ಟೆ ಹರಿಯಪ್ಪನಹಳ್ಳಿ ಜೈನರು, ಜೈನಯತಿಗಳ ಹರಪನಹಳ್ಳಿಗೆ ಹತ್ತಿರದ "ಯರಬಳ್ಳಿ" ಪರ್ವದ ಮೇಲೆ ತಪಸ್ಸು ಆಚರಿಸಿ, ನಿರ್ಮಾಣ ಹೊಂದಿರುವರು ಪೂರ್ವದಿಂದಲೂ ಇಲ್ಲಿ ಹೆಚ್ಚು ಜನ ಜೈನರು ವಾಸಿಸಿರುವರು. ಜೈನ ಬಸದಿಗಳಿರುವುವು ಜೈನ ಸಂಸ್ಕೃತಿ ಹೆಚ್ಚು ಹೊಂದಿಕೊಂಡಿರುವ ಜೈನರ ಬೀಡಾಗಿರುವ ಹರಿಯಪ್ಪನಹಳ್ಳಿಗೆ ಶಿವಕೋಟ್ಯಾಚಾರ್ಯರು "ಹರಿಪುರಿಪೊಳಲ್" ಎಂದು ಕರೆದಿರಬೇಕು.

ಹದಿಮೂರನೇ ಶತಮಾನದ ಕೊನೆಗೆ ಈ ಗ್ರಾಮ ಬಾಗಳಿ ಪಟ್ಟಣಕ್ಕೆ ಸೇರಿದೆ. ಅದರ ಬಗ್ಗೆ ಬಾಗಳಿಯ ಒಂದು ಕಂಚಿನ ಪತ್ರದಲ್ಲಿ ಉಲ್ಲೇಖವಿದೆ. ಬಾಗಳಿ ಪಟ್ಟಣ ಹಾಳಾದ ಮೇಲೆ ಕೆಲ ಜೈನರು ಬಾಗಳಿಯಿಂದ, ಕೋಗಳಿಯಿಂದ,ಮೋರಗೇರಿ ಪ್ರದೇಶಗಳಿಂದ ಬಂದು ಹರಪನಹಳ್ಳಿಯಲ್ಲಿ ವಾಸಿಸಿರುವರು. ಅದರಲ್ಲಿ ಬಹುಜನರಿಗೆ ಬೋಗಾರರೆಂದು ಕರೆಯುವರು.

ಹರಪನಹಳ್ಳಿಯನ್ನು ಆಳಿದ ಪಾಳೆಗಾರರಿಗೆ ಕೆಳದಿ ನೃಪವಿಜಯದಲ್ಲಿ "ಹರಿಪುರಾದೀಶ್ವರ" ರೆಂದು ನೆರೆಯ ಅರಸರು, ಹರಪನಹಳ್ಳಿ ಅರಸರಿಗೆ ಬರೆದ ಪತ್ರಗಳಲ್ಲಿ "ಹರಿಪುರ ಸಂಸ್ಥಾನದೀಶ್ವರ" ರೆಂಬ ಉಲ್ಲೇಖಗಳಿರುವವು. ಇದರಿಂದ ಹರಪನಹಳ್ಳಿ ಜನರಾಡುವ ಸಾಮಾನ್ಯ ಭಾಷೆಯಲ್ಲಿ ಹರಪನಹಳ್ಳಿ ಯಾಗಿರಬಹುದು. ಹರಪನಹಳ್ಳಿ ಪಾಳೆಗಾರರ ಪುರೋಹಿತರ ಪೂರ್ವದವರು, ಕಾಮಭಟ್ಟರು, ಅವರು ಹರಭಕ್ತರು ಅವರ ಕಾಲದಲ್ಲಿಯಾಗಲಿ ಇಲ್ಲವೇ ಹರಪನಹಳ್ಳಿ ಪಾಳೆಗಾರರು ವೀರಶೈವ ಧರ್ಮವನ್ನು ಸ್ವೀಕರಿಸಿದರು, ಅವರ ಕಾಲದಲ್ಲಿಯಾಗಲಿ ಹರಿಪುರಿ ಹರಿಯಪ್ಪನಹಳ್ಳಿ ಹರಪನಹಳ್ಳಿಯಾಗಿರಬೇಕು.

ಹಿಂದಿನ ಪಾಳೆಗಾರರ ಆಡಳಿತ ಕಾಲದಲ್ಲಿ ಈ ಊರಲ್ಲಿ ರಾಜ ಸೋಮಶೇಖರನ ಕಾಲದಲ್ಲಿ ದೇವಸ್ಥಾನ ಮತ್ತು ಕೆರೆಗಳನ್ನು ನಿರ್ಮಿಸಿದರು. ಎಂದು ಹಲವಾರು ಶಾಸನಗಳು ಮತ್ತು ಪತ್ರಗಳಲ್ಲಿ ಉಲ್ಲೇಖವಿರುವುದು ಕಂಡು ಬರುತ್ತದೆ. ಈ ಅಂಶಗಳನ್ನು ಗಮನಿಸಿದಾಗ ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಮುಂದುವರಿದ ಪ್ರದೇಶವೆಂದು ಗೋಚರವಾಗುತ್ತದೆ.- ೨

ಇಂದಿನ ಕಾಲದಲ್ಲಿ ತಮ್ಮದೇ ಆದ ಆಡಳಿತಾತ್ಮಕವಾಗಿ , ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ವ್ಯವಹಾರಿಕವಾಗಿ, ಜಾನಪದೀಯವಾಗಿ, ತನ್ನದೇ ಆದ ಸ್ಥಾನಮಾನಗಳನ್ನು ಉಳಿಸಿಕೊಂಡು ಬಂದಿದೆ.

ಈ ಭಾಗವು ಪಾಳೆಗಾರರ ಆಳ್ವಿಕೆ ಕಾಲದಲ್ಲಿ ಕೆರೆ– ಕೋಟೆ  ಕೊತ್ತಲುಗಳನ್ನು ನಿರ್ಮಿಸಿದರು. ಹಾಗೂ ಈ ಊರಿನ ಜನರ ಉದ್ಯೋಗ ಕೃಷಿ ಪ್ರಧಾನವಾಗಿರುವುದರ ಜೊತೆಗೆ ಇದು ತಾಲೂಕು ಕೇಂದ್ರವಾಗಿದ್ದರಿಂದ ಹಲವಾರು ಕೋರ್ಟು ಕಛೇರಿಗಳು ಶಾಲಾ ಕಾಲೇಜುಗಳು ಇಲ್ಲಿಯೇ ಇರುವುದರಿಂದ ಹಲವಾರು ನೌಕರಸ್ಥರು ಇರುವುದರಿಂದ ಈ ಹರಪುರ ಆರ್ಥಿಕವಾಗಿ ಸಭಲರಾಗಲಿಕ್ಕೆ ಕಾರಣವಾಯಿತು. ಹೀಗೆ ಹರಪನಹಳ್ಳಿಯ ಜನರು ಜೀವನ ನಡೆಸುತ್ತಾ ಜನಪದ ಷಟ್ಪದಿಯ ರೂಪದಲ್ಲಿ ಹರಪನಹಳ್ಳಿ ಕುರಿತು ಹೀಗೆ ಗರತಿಯರು ಹೇಳುತ್ತಾರೆ.

ಅಂದಕ ಹರಪನಹಳ್ಳಿ ಚಂದಾಕ ಚಾರಿಬಯಲ
ಚಂದ್ರಮತಿಯೆಂಬ ಹಿರೆಕೇರಿ
ಚಂದ್ರಮತಿಯೆಂಬ ಹಿರೆಕೇರಿ ಎರಿಮ್ಯಾಲೆ
ತಿದ್ದಿಟ್ಟರವ್ವ ಚಲುವಾನ
ತಿದ್ದಿಟ್ಟರವ್ವ ಚಲುವಾನ ಹಣೆಮ್ಯಾಲೆ
ತಿದ್ದಿಟ್ಟರವ್ವ ತಿಳಿನಾಮ

ಜನಪದರ ಹಾಡುಗಳಲ್ಲಿ ಹರಪನಹಳ್ಳಿಯನ್ನು ವರ್ಣಿಸುವ ಗರತಿಯು ಅದೊಂದು ಚಂದದ ಊರು, "ಚಂದ್ರಮತಿಯೆಂಬ ಹಿರೆಕೇರಿ ಏರಿಮ್ಯಾಲೆ" ಇಲ್ಲೊಂದು ಕೆರೆಯಿತ್ತು ಎಂಬುದನ್ನು ಮೌಖಿಕ ಚರಿತ್ರೆಯ ಮೂಲಕ ಗೊತ್ತಾಗುತ್ತದೆ. ಅದರ ಮೇಲೊಬ್ಬ ಚಲುವನಿದ್ದಾನೆ ಅವನ ಹಣೆಮ್ಯಾಲೆ ತಿಳಿನಾಮ ಮೂರು ವಿಭೂತಿಯ ನಾಮಧರಿಸಿದಂತಹ ಸ್ವಾಮಿಯನ್ನು ಕುರಿತು ಹೇಳುವ ಮಾತಾಗಿದೆ.

### ೨.೨ ಸಾಂಸ್ಕೃತಿಕ

ಈ ಪ್ರದೇಶದ ಜನರ ಕೊಡುಗೆ ಸಾಂಸ್ಕೃತಿಕವಾಗಿ ಅಮೋಘವಾದುದು,ಶನಿವಾರ ಬಂತೆಂದರೆ ಬಸವಣ್ಣ, ಮೈಲಾರಲಿಂಗ, ಬೆಟ್ಟದ ಮಲ್ಲಣ್ಣ, ಕುರುವತ್ತಿ ಬಸವೇಶ್ವರ, ಇವರ ಕುರಿತು ಹಾಡನ್ನು ಹೇಳುವುದು. ದಾಸರಪದಗಳನ್ನು, ಎಲ್ಲಮ್ಮ, ಕಾಳಮ್ಮ, ದುರುಗಮ್ಮ, ಗುಳೇದಲಕ್ಕಮ್ಮ ಜೋಗಯ್ಯರ ಪದಗಳನ್ನು ವಿಶಿಷ್ಠ ಸಂದರ್ಭಗಳಲ್ಲಿ ಈ ಮಠದ ಮೇಲೆ ಹೀಗೆ ಹಾಡನ್ನು ಹೇಳುತ್ತಾರೆ.

ಚಂದ್ರಮೌಳೇಶ್ವರರ ಚಂದದಿಂದ ಬೆಳಗಿದ ದೀಪ
ವೀರಗಂಗಾಧರ ವಿಜಯದ ದೀಪ
ರೇಣುಕರಲ್ಲಿ ರಂಜಿಸಿದ ದೀಪ
ಬೇಳ್ಳಿ ಹಬ್ಬದಿ ಮಿನುಗುವ ದೀಪ

ಚಂದ್ರಮೌಳೇಶ್ವರ ನಂದಾದೀಪ
ಮುಂದಿನ ಲೋಕದಿ ನಂದಾ ದೀಪ
ತೆಗ್ಗಿನಮಠದ ನಂದಾದೀಪ
ದೀನದಲಿತರಿಗೆ ಬೆಳಕಾದ ದೀಪ

**ಕನ್ನಡನಾಡಿನ ಬಾವೈಕ್ಯದ ದೀಪ**
**ಗ್ರಾಮೋದ್ಧಾರ-ದೇಶೋದ್ಧಾರಕನಾಗಿ**
**ಬೆಳಗುವ ಚಂದ್ರನ ಬೆಳಕಿನ**
**ಚಂದ್ರಮೌಳೇಶ್ವರ ನಂದಾ ದೀಪ**

ಶಿವಕೋಟ್ಯಾಚಾರ್ಯರು ಮತ್ತು ಪಂಚಗಣಾದೀಶ್ವರರನ್ನು ಕುರಿತು ಹಾಡು ಹೇಳುವುದು. ಇಂತಹ ಕಲೆಗಳೆಲ್ಲವನ್ನು ಕರಗತಮಾಡಿಕೊಂಡಿದ್ದಾರೆ. ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಶ್ರೀಮೈಲಾರ ಲಿಂಗಸ್ವಾಮಿ ಜಾತ್ರಾ ಕಾರ್ಣಿಕೋತ್ಸವದೊಂದಿಗೆ ಜರುಗಿದರೆ ಪ್ರತಿ ವರ್ಷ ಗೌರಿಹುಣ್ಣಿಮೆಯಲ್ಲಿ ಶ್ರೀವೀರಭದ್ರದೇವರ ರಥೋತ್ಸವ ಜರುಗಿದ ಮೂರನೇ ದಿನದಂದು ಜಾತ್ರೆ ನೆಡೆಯುವುದಲ್ಲದೇ ಅಗ್ನಿ ತುಳಿಯುವುದು, ಕೆಂಡಹಾಯುವುದು ನಡೆಯುವದು. ಪ್ರತಿ ವರ್ಷ ಶ್ರಾವಣಮಾಸದಲ್ಲಿ ಕೆಂಪಯ್ಯನ ಮಠದಲ್ಲಿ ಪುರಾಣ, ಪ್ರವಚನ ನಡೆಯುತ್ತವೆ. ಪೂಜ್ಯರ ಅಡ್ಡ ಪಲ್ಲಕ್ಕಿ ಉತ್ಸವ ನಡೆಯುವ ಸಂದರ್ಭದಲ್ಲಿ ಡೊಳ್ಳು ಕುಣಿತ ಸಮಳವಾದ್ಯ, ನಂದಿಕೋಲು ಕುಣಿತ,ಗೊಂಬೆಯಾಟ, ಕುದುರೆಕುಣಿತ, ಮತ್ತು ವೀರಭದ್ರನ ಒಡಪು ಹೇಳುವುದು ಪುರುವಂತರು ಕುಣಿಯುತ್ತಾ ಹಾಡು ಹೇಳುವುದು ಮುಂತಾದ ಕಲೆಗಳಲ್ಲಿ ಪರಿಣಿತಿಯನ್ನು ಸಾಧಿಸಿ ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಳ್ಳುತ್ತಾ ಇಂತಹ ಜನಪದ ಕಲೆಗಳನ್ನು ಹಬ್ಬ ಹರಿದಿನ ಉತ್ಸವ ಜಾತ್ರೆಗಳನ್ನು ಜಾನಪದ ಕಲೆಗಳ ಪ್ರದರ್ಶನದ ಮೂಲಕ ಜನಸಾಮಾನ್ಯರನ್ನು ರಂಜಿಸುವುದು ರೂಢಿಯಲ್ಲಿದೆ.

**ಸಾಮಾಜಿಕ**

ಈ ಪಟ್ಟಣದಲ್ಲಿ ಹಿಂದೂ, ಮುಸ್ಲಿಂ, ಜೈನ, ಮುಂತಾದ ಜನರು ನೆಲೆಗೊಂಡಿದ್ದಾರೆ. ಹಲವಾರು ಜಾತಿ, ಸಮುದಾಯಗಳು ಒಂದು ಊರಿನಲ್ಲಿ ಒಟ್ಟಿಗೆ ಬದುಕುತ್ತಿದ್ದರು. ಯಾವುದೇ ತಾರತಮ್ಯ ಮನೋಭಾವ ಅವರಲ್ಲಿರಲಿಲ್ಲ. ಅಣ್ಣ ತಮ್ಮಂದಿರಂತೆ ನಡೆದಾಡುತ್ತಾರೆ. ಇನ್ನೂ ನಗರೀಕರಣದ ಬುದ್ಧಿವಂತಿಕೆ ಅಲ್ಲಿರುವ ಜನರಲ್ಲಿಲ್ಲ. ತುಂಬಾ ಭಾವನಾತ್ಮಕವಾಗಿಯೇ ಬೆರೆತುಕೊಂಡು ಹೋಗುತ್ತಾರೆ. ಹಾಗಾಗಿ ಸಮಾಜದಲ್ಲಿ ಸಾಮರಸ್ಯ ಮತ್ತು ಐಕ್ಯತೆಯು ಕಂಡು ಬರುತ್ತದೆ. ಎಲ್ಲಾ ಕೋಮುಗಳಲ್ಲಿ ಆಂತರಿಕ ಸಂಬಂಧ ಬಹಳ ಸ್ನೇಹಮಯವಾಗಿದೆ. ಏಕೆಂದರೆ ಹಲವಾರು ಮಠಗಳು ಮತ್ತು ಶಿವಾಚಾರ್ಯರು ನಲೆಸಿದ ಹಾಗೂ ಪಂಚಗಣಾದೀಶರರು ಹಾಗೂ ಸ್ವಾಮಿಗಳ ವ್ಯಕ್ತಿತ್ವದ ಮಹತ್ವ ಈ ನೆಲದಲ್ಲಿ ನೆಲೆಗೊಂಡಿರುವುದರಿಂದ ಕೋಮುಗಳಲ್ಲಿ ಆಂತರಿಕ ಪಿತೂರಿಳ ಸಂಘರ್ಷಕ್ಕೆ ನಾಂದಿಯಾಗದೇ ವಿಚಾರವಿನಿಮಯಗಳ ಮೂಲಕ ಸಂಘರ್ಷಕ್ಕೆ ವಿರಾಮ ಹೇಳಿ ಶಾಂತಿ ಸಹನೆ ಮತ್ತು ಸಹಬಾಳ್ವೆಯಿಂದ ಜೀವನ ನಡೆಸುತ್ತಿರುವುದು ಕಂಡು ಬರುತ್ತದೆ. ಗಾಳಿಹಳ್ಳಿ, ಸಿದ್ಧಾಪುರ, ದಾದಾಪುರ ಒಬಳಾಪುರ, ಕನಕನಹಳ್ಳಿ ಮುಂತಾದ ಹಳ್ಳಿಗಳು ಹಾಳಾಗಿ ಹರಪನಹಳ್ಳಿ ದೊಡ್ಡ ಪಟ್ಟಣವಾಗಿರುವುದು ಒಂದೊಂದು ಜನಾಂಗದವರಿಗೆ ಒಂದೊಂದು ಪ್ರತ್ಯೇಕ ಓಣಿಗಳು ಸ್ಥಾಪನೆಯಾಗಿರುವವು.

ಕುರುಬ ಸಮಾಜದವರು ವಾಸಿಸುವ ವಠಾರಕ್ಕೆ ಕುರುಬಗೇರಿಯಂತಲೂ, ಕೆ.ಎಸ್.ಆರ್.ಟಿ.ಸಿ. ಬಸ್‌ನಿಲ್ದಾಣದಿಂದ ದಾವಣಗೆರೆಗೆ ಮತ್ತು ಅರಸಿಕೇರೆಗೆ ಹೋಗುವ ಮೊದಲಿಗೆ ದಾರಿಯ ಅಕ್ಕ ಪಕ್ಕ ವಾಲ್ಮೀಕಿ ಸಮುದಾಯದವರು ವಾಸಿಸುವ ಸ್ಥಳಕ್ಕೆ ಬ್ಯಾಡಗೇರಿ ಎಂತಲೂ ಕೆಂಪಯ್ಯನಮಠ (ಟಿ.ಎಂ.ಎ.ಇ. ಪ್ರೌಢಶಾಲೆ) ಸುತ್ತಮುತ್ತಲು ಲಿಂಗಾಯತ ಸಮುದಾಯದವರು ವಾಸವಾಗಿರುವ ವಠಾರಕ್ಕೆ ಮೇಗಳಪೇಟೆಯಂತಲೂ ಹಾಗೂ ಗುಂಡಿನಕೇರೆ, ಬ್ರೂಸ್‌ಪೇಟೆ, ಸೊಂಡೂರುಗೇರೆ, ಹಳೆಬಸ್‌ನಿಲ್ದಾನದಿಂದ ಹೊಸಪೆಟೆಗೆ ಹೋಗುವ ಹೆದ್ದಾರಿಯ ಅಕ್ಕಪಕ್ಕ ವೈದಿಕ ಸಮುದಾಯದವರು ವಾಸವಾಗಿದ್ದಾರೆ. ಈ ವಠಾರವನ್ನು ಬ್ರಾಹ್ಮಣರ ಓಣಿಯಂತಲೂ ಹಾಗೂ ವೀರಭದ್ರೇಶ್ವರ ಗುಡಿಯಿಂದ ನೇರವಾಗಿ ಸ್ವಲ್ಪ ದೂರ ಹೋದ ಮೇಲೆ ಪೂರ್ವ ಮತ್ತು ಪಶ್ಚಿಮಕ್ಕೆ ಮುಸ್ಲಿಂ ಸಮುದಾಯದವರು ವಾಸವಾಗಿದ್ದಾರೆ. ಈ ಸ್ಥಳವನ್ನು ಮುಸ್ಲಿಂರ ವಠಾರವೆಂತಲೂ ಹಾಗೂ ಇದರ ಪೂರ್ವಕ್ಕೆ ಹರಿಜನವಾಸವಾಗಿದ್ದಾರೆ ಈ ವಠಾರಕ್ಕೆ ಡಾ. ಅಂಬೇಡ್ಕರ್ ಬಡಾವಣೆಯಂತಲೂ ಮತ್ತು ಹರಪನಹಳ್ಳಿ ಮಧ್ಯದಲ್ಲಿ ತಾಯಮ್ಮನ ಹುಣಸೆಮರದ ಸುತ್ತಮುತ್ತಲ ಪ್ರದೇಶದಲ್ಲಿ ಬಣಜಿಗರು ಮಾರವಾಡಿಗ ಸಮುದಾಯದವರು ವಾಸವಾಗಿರುವ ವಠಾರಕ್ಕೆ ಬಣಗಾರಪೇಟೆಯಂತಲೂಕರೆಯುತ್ತಾರೆ. ಇಡೀ ಹರಪನಹಳ್ಳಿ ಜನತೆಗೆ ಹೈನ ಬೇಕೆಂದರೆ ಆ ಒಂದು ಸಮುದಾಯದವರು ಶ್ರೀವೀರಭದ್ರೇಶ್ವರ ದೇವಸ್ಥಾನದ ಹಿಂದೆ ವಾಸಿಸುವವರೇ ಗೌಳಿ ಜನಾಂಗದವರಾಗಿದ್ದಾರೆ. ಆದಕಾರಣ ಇವರ ಮನೆ ಮುಂದೆ ಜನರು ಓಡಾಡಲಿಕ್ಕೆ ಮತ್ತು ಇವರಿಗೆ ಇರುವ ದಾರಿಯನ್ನೇ ಗೌಳಿಗರ ಓಣಿಯಂತಲೂ ಕರೆಯುತ್ತಾರೆ. ಜನಸಂಖ್ಯೆ ಹೆಚ್ಚಾದಂತೆಲ್ಲಾ ಆರ್ಥಿಕತೆಯಿಂದ ಜನರು ಸಬಲರಾಗಿ ಇತ್ತೀಚೆಗೆ ಆಧುನಿಕತೆಯಿಂದ ಹೊಸ ಹೊಸ ವಠಾರಗಳನ್ನು ನಿರ್ಮಿಸಿಕೊಂಡಿದ್ದಾರೆ. ಅವುಗಳೇ ಆಚಾರಿ ಲೇಔಟ್, ಮತ್ತು ಬಸವೇಶ್ವರನಗರ ವೆಂತಲೂ ಕರೆದಿದ್ದಾರೆ. ಅಲ್ಲದೇ ರೈತರು ಬೆಳೆದ ಬೆಳೆಗೆ ಒಳ್ಳೆಯ ಬೆಳೆ ಸಿಗಲಿ ಎಂದು ಧಾನ್ಯಗಳ ವ್ಯವಹಾರ ಮಾಡಲಿಕ್ಕೆ ಮಾರುಕಟ್ಟೆ ಇದೆ.

ಹಲವಾರು ಸರಕಾರಿ ಸೌಲಭ್ಯಗಳನ್ನು ಗ್ರಾಮೀಣ ರೈತರ ದೃಷ್ಟಿಯಿಂದ ಜನತೆಯ ಅನುಕೂಲಕೋಸ್ಕರವಾಗಿ ಬೇರೆ ಊರಿಗೆ ಹೋಗಬೇಕಾದ ಪ್ರಮೇಯವಿಲ್ಲ. ಕೆಲವು ಸರಕಾರಿ ಕಛೇರಿಗಳು ಇನ್ನೂ ಕೆಲವು ಅಭಿವೃದ್ಧಿ ಹಂತದಲ್ಲಿವೆ.

ಇತ್ತ ಹರಪನಹಳ್ಳಿಗೆ ಯಾರಾದರೂ ದೂರದ ಊರಿನವರು ಮಹೋನ್ನತರು ಬಂದರೆ ಉಳಿದುಕೊಳ್ಳಲಿಕ್ಕೆ (ಐ.ಬಿ.) ವಸತಿಗೃಹ ಇದೆ. ಈ ಪ್ರದೇಶದಲ್ಲಿ ಶಾಂತಿ ಕದಡದಂತೆ ಹಲವು ಸಮಸ್ಯಗಳನ್ನು ಬಗೆಹರಿಸಲಿಕ್ಕೆ ಪೋಲಿಸ್‌ಠಾಣೆ ಇದೆ. ತಾಲೂಕ ಕಛೇರಿ, ಭೂಕಂದಾಯ ಇಲಾಖೆ, ಜನರಿಗೂ ಮತ್ತು ಪಶುಗಳಿಗೆ ರೋಗರುಜಿನ ಬಾರದಂತೆ ತಡೆಯಲು (ಪಶು) ಸಾರ್ವಜನಿಕ ಆಸ್ಪತ್ರೆಗಳಿವೆ. ರೇಷ್ಮೇ ಬೆಳೆಯನ್ನು ಬೆಳೆಯಲಿಕ್ಕೆ ಹೆಚ್ಚಿನ ಉತ್ಸಾಹ ನೀಡಿ ರೀಯಾಯ್ತಿ ದರದಲ್ಲಿ ಗೊಬ್ಬರ ಒದಗಿಸಿ ರೈತರನ್ನು ಆರ್ಥಿಕವಾಗಿ ಸಬಲರಾಗಲಿ ಎಂದು ಒಂದು ರೇಷ್ಮೆ ಇಲಾಖೆ ಹಾಗೂ ಇನ್ನೂ ಹಲವಾರು ಇಲಾಖೆಗಳಿವೆ.

## ಧಾರ್ಮಿಕ

ಈ ಪಟ್ಟಣವನ್ನು ಧಾರ್ಮಿಕವಾಗಿ ಹೇಳುವುದಾದರೆ ಮಹತ್ವಪೂರ್ಣ ಮಹಿಮೆಯಿಂದ ಮೆರೆದಿದೆ. ಪಾಳೆಗಾರರು ನಿರ್ಮಿಸಿದ ಅನೇಕ ದೇವಾಲಯಗಳು, ಮಠ, ಮಂದಿರಗಳು ಇವೆ. ಹರಪನಹಳ್ಳಿಯ ಉತ್ತರ ದಿಕ್ಕಿಗೆ ಗೋಸಾವಿ ಪರ್ವತವಿರುವುದು. ಅದರ ಮೆಲೆ ಪರ್ವತರಾಮೇಶ್ವರ ದೇವಸ್ಥಾನ ಇರುವುದು ಪಶ್ಚಿಮಕ್ಕೆ ಮೈಲಾರಲಿಂಗಸ್ವಾಮಿ ದೇವಸ್ಥಾನವಿರುವುದು ಇದರ ಪಕ್ಕದ ಪರ್ವತದ ಮೇಲೆ ಶ್ರೀ ಉಚ್ಚಂಗೆಮ್ಮ ದೇವಿಯಗುಡಿಯಿರುವುದು. ಪಕ್ಕದಲ್ಲಿ ನೈಋತ್ಯ ದಿಕ್ಕಿನಲ್ಲಿರುವ ಹಾಳು ಬಿದ್ದ ಕೋಟೆಯಲ್ಲಿ ಜೈನ ಬಸದಿಯಿರುವುದು ಪಟ್ಟಣದ ಒಳಗಡೆ ಒಂದು ಜೈನ ಬಸದಿ ಬ್ರಾಹ್ಮಣರ ಬೀದಿಯಲ್ಲಿ ಶ್ರೀಪ್ರಸನ್ನವೆಂಕಟರಮಣಸ್ವಾಮಿ ಗುಡಿಯಿರುವುದು. ಗಂಗಾಧರೇಶ್ವರ, ಗೋಕರ್ಣೇಶ್ವರ, ಮದ್ವಾಚಾರ್ಯ, ಇನ್ನೂ ಹಲವಾರು ದೇವರಮಠಗಳಿರುವವು. ಇವುಗಳಿಗೆ ವಾಸ್ತುಶಿಲ್ಪದ ಪ್ರಾಮುಖ್ಯತೆ ಇಲ್ಲ. ಕ್ರಿ.ಶ. ೧೫೬೫ ರಲ್ಲಿ ಬಾಗಳಿಯಿಂದ ಬಂದ ದಾದಯ್ಯನಾಯಕ ಹಾಳುಬಿದ್ದ ಕೋಟೆಯಲ್ಲಿ ಹುದುಗಿದ ಶ್ರೀ ಹನುಮಂತ ದೇವರ ವಿಗ್ರಹವನ್ನು ಹೊರತೆಗೆದು ಕೋಟೆ ಆಂಜನೇಯ ದೇವಸ್ಥಾನ ನಿರ್ಮಿಸಿದನು ಎಂದು ತಿಳಿಯುತ್ತದೆ. ಈ ಭಾಗದಲ್ಲಿ ಪಂಚಗಣಾಧೀಶ್ವರರ ಮಹಿಮೆ ಅಪಾರವಾದುದು ಅವರಲ್ಲಿ ಒಬ್ಬರಾದ ಕೆಂಪಯ್ಯ ನೆಲೆಸಿದ ಸ್ಥಳವಾಗಿದೆ. ಹಿಂದೆ ದಾಸೋಹಕ್ಕೆ ವಿಶಾಲ ಭೂಪ್ರದೇಶವು ಇದೆ.

ಹರಪನಹಳ್ಳಿ ತಾಲೂಕಿನ ಪಕ್ಕ ೧೦ ಕಿ.ಮೀ. ದೂರದಲ್ಲಿರುವ ಕೂಲಹಳ್ಳಿಯಲ್ಲಿ ಮದ್ದಾನಸ್ವಾಮಿಯ ಮಗ ಗೋಣಿಬಸವೇಶ್ವರ ನೆಲೆಸಿದ ಸ್ಥಳವಾಗಿದೆ. ಇಲ್ಲಿಯೂ ಅನೇಕ ಪವಾಡಗಳು ನಡೆದಿವೆ ಹರಿಹರಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿ ಗೋಣಿಬಸವಣ್ಣನ ದೇವಸ್ಥಾನವಿದೆ ವೀರಭದ್ರ ಮತ್ತು ಕಾಳಮ್ಮನ ದೇವಸ್ಥಾನ, ೧೨ ಗರಡಿಮನೆ ಇವೆ. ಇಲ್ಲಿಯೇ ತೆಗ್ಗಿನಮಠವಿದೆ. ಒಂದು ಕಾಲದಲ್ಲಿ ಹರಿದು ಹಂಚಿ ಹೋಗಿದ್ದಂತಹ ಈ ಊರು ತೆಗ್ಗಿನಮಠ ಸ್ಥಾಪನೆಯಾದಾಗಿನಿಂದ ಜಾತಿ ಮತ ಬೇಧವೆನ್ನದೇ ಜನರು ಮಠಕ್ಕೂ ಅಲ್ಲಿರುವ ಸ್ವಾಮೀಜಿಯವರಿಗೂ ತುಂಬಾ ದೈನ್ಯತೆಯಿಂದ ನಡೆದುಕೊಳ್ಳುತ್ತಾರೆ. ಹಾಗಾಗಿ ಹರಪನಹಳ್ಳಿ ಹಿಂದೂ ಧರ್ಮಿಯರು ನೆಲೆಸಿದ ತಾಣವಾಗಿದೆ.

## ಶೈಕ್ಷಣಿಕ

ಒಂದು ಪ್ರದೇಶ ಅಭಿವೃದ್ಧಿ ಹೊಂದಿದೆಯೇ, ಅಭಿವೃದ್ಧಿ ಹೊಂದುತ್ತಿದೆಯೇ ಎನ್ನುವುದನ್ನು ತಿಳಿಯಲು ಯಾವುದೇ ಮಾನದಂಡ ಮುಖ್ಯವಾಗುವುದಿಲ್ಲ. ಶೈಕ್ಷಣಿಕ ಸಾಧನೆಯ ಮುಖ್ಯ ಅದರಿಂದಲೇ ಒಂದು ಪ್ರದೇಶ ಒಂದು ಸಮುದಾಯ, ಹೆಣ್ಣು-ಗಂಡು ಎಲ್ಲವನ್ನು ಕೂಡ ಅಳೆಯಬಹುದಾಗಿದೆ. "ಶಿಕ್ಷಣವೇ ಶಕ್ತಿ ಶಿಕ್ಷಣವೇ ಬಾಳಿನ ಬುತ್ತಿ" ಅದುವೇ ಮಾನವನ ಆಸ್ತಿ ಎಂದು ಮನವರಿಕೆ ಮಾಡಿಕೊಂಡು ಶ್ರೀ ಚಂದ್ರಮೌಳೀಶ್ವರ ಶಿವಾಚಾರ್ಯರು ತಮ್ಮ ಸಂಪೂರ್ಣ ಬದುಕನ್ನೇ ವಿದ್ಯಾ ಸಂಸ್ಥೆಗಳ ಸ್ಥಾಪನೆ ಉಳಿವು ಬೆಳವಣಿಗೆಗಾಗಿ ಸಮರ್ಪಿಸಿಕೊಂಡಿದ್ದಾರೆ. ಕರ್ನಾಟಕದ ಯಾವುದೇ ಕೇಂದ್ರವನ್ನು ತೆಗೆದುಕೊಂಡರೂ ಸಮರ್ಪಕವಾದ ಶಿಕ್ಷಣ ಇಲಾಖೆಗಳಿಲ್ಲದಿರುವದು ಕಂಡುಬರುತ್ತದೆ. ಹಾಗೆಯೆ

ಕೆಲವೊಂದು ಜಿಲ್ಲಾ ಕೇಂದ್ರವೊಂದನ್ನು ತೆಗೆದುಕೊಂಡಾಗಲೂ ಪ್ರಮುಖವಾದ ಶಿಕ್ಷಣದ ಕಾಲೇಜುಗಳಿಲ್ಲದಿರುವದು ಕಂಡು ಬರುತ್ತದೆ. ಆದರೆ ಹರಪನಹಳ್ಳಿಯಂತಹ ಚಿಕ್ಕ ತಾಲೂಕು ಹಾಗೂ ಆರ್ಥಿಕವಾಗಿ ಹಿಂದುಳಿದ ತಾಲೂಕಾಗಿದ್ದಾಗಲೂ ಸಹ ಇಲ್ಲಿರುವ ಶಾಲಾಕಾಲೇಜುಗಳನ್ನು ನೋಡಿದರೇ ಇಲ್ಲಿ ಬಂದು ಅಧ್ಯಯನ ಮಾಡುತ್ತಿರುವ ದೇಶ ವಿದೇಶಗಳ ವಿದ್ಯಾರ್ಥಿಗಳು ಹಾಗೂ ಬೇರೆ ರಾಜ್ಯಗಳ ವಿದ್ಯಾರ್ಥಿಗಳನ್ನು ನೋಡಿದಾಗ ಇದೊಂದು ಚಿಕ್ಕ ವಿಶ್ವವಿದ್ಯಾಲಯದಂತೆ ಕಾಣುತ್ತದೆ. ಏಕೆಂದರೆ ಇಲ್ಲಿರುವ ವಿವಿಧ ಶಿಕ್ಷಣದ ಕೋರ್ಸ್‌ಗಳನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಇವೆಲ್ಲಕ್ಕೂ ಕಾರಣಕರ್ತರು ತೆಗ್ಗಿನಮಠದ ಶ್ರೀಗಳಾಗಿದ್ದಾರೆ. ಈ ಊರಲ್ಲಿ ಒಂದು ಸರ್ಕಾರಿ ಕಾಲೇಜು ಮತ್ತು ಹಲವಾರು ಪ್ರಾಥಮಿಕ ಶಾಲೆಗಳು ಇರುವುದರ ಜೊತೆಗೆ ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಹಾಗೂ ರಾಜಸೋಮಶೇಖರ ಅವರ ಹೆಸರಿನಲ್ಲಿ ನಡೆಯುವ ಆಂಗ್ಲ ಮತ್ತು ಕನ್ನಡ ಮಾಧ್ಯಮ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿವೆ ಶ್ರೀಶೈಲ ಜಗದ್ಗುರುಗಳ ಹೆಸರಿನಲ್ಲಿ ಐ.ಟಿ.ಐ. ಕಾಲೇಜು ಹಾಗೂ ಸಿರಿಗೇರಿ ಸಂಸ್ಥೆಯವರ ಹೆಸರಿನಲ್ಲಿ ಪಿ.ಯು.ಸಿ., ಪದವಿ, ಮತ್ತು ಡಿಪ್ಲೋಮಾ ಕಾಲೇಜುಗಳು ನಡೆಯುತ್ತವೆ. ಹಾಗೂ ತೆಗ್ಗಿನಮಠದ ಟಿ.ಎಂ.ಎ.ಇ.ಸಂಸ್ಥೆಯ ಹೆಸರಿನಲ್ಲಿ ನಡೆಯುವ ಶಾಲಾ ಕಾಲೇಜುಗಳು ಹೆಚ್ಚು ಕಂಡುಬರುತ್ತವೆ.

೧. ಮೇಗಳಪೇಟೆಯಲ್ಲಿರುವ ಪ್ರೌಢ ಶಾಲೆ, ಹಾಗೂ ಡಿ. ಇಡಿ. ಶಿಕ್ಷಕರ ತರಬೇತಿ ಕೇಂದ್ರ

೨. ವೀರಶೈವ ವಿದ್ಯಾವರ್ಧಕ ಸಂಘ ಸಂಸ್ಥೆಯ ಹೆಸರಿನಲ್ಲಿ ಪದವಿ ಮತ್ತು ಪದವಿ ಪೂರ್ವ ಕಾಲೇಜಗಳಿವೆ.

೩. ಹರಪನಹಳ್ಳಿಗೆ ಸಮೀಪವಿರುವ ನೀಲಗುಂದ ಗ್ರಾಮದಲ್ಲಿರುವ ಪ್ರೌಢಶಾಲೆ ಕುಮಾರನಹಳ್ಳಿ ತಾಂಡಾದಲ್ಲಿರುವ ಶ್ರೀ ಹರಿಶ್ಚಂದ್ರನಾಯಕ್ ಗೋಗಲಿಬಾಯಿ ಪ್ರೌಢಶಾಲೆ,

೪. ಬಿ. ಇಡಿ. ಡಿ. ಇಡಿ. ಮತ್ತು ಬಿ. ಫಾರ್ಮ, ಡಿ. ಫಾರ್ಮ, ಎಂ. ಫಾರ್ಮ ಕಾಲೇಜು ಹಾಗೂ ಶ್ರೀಉಜ್ಜನಿ ಜಗದ್ಗುರು ಮರುಳಾರಾಧ್ಯ ಪದವಿಪೂರ್ವ ಕಾಲೇಜುಗಳು ಹರಪನಹಳ್ಳಿಯಲ್ಲಿವೆ. ಹರಪುರ ಶೈಕ್ಷಣಿಕವಾಗಿ ಈ ಎಲ್ಲಾ ಸಂಸ್ಥೆಗಳನ್ನು ಒಳಗೊಂಡಿದೆ.

ಇಷ್ಟೊಂದು ಅಧಿಕಶಿಕ್ಷಣ ಸಂಸ್ಥೆಗಳನ್ನು ಒಳಗೊಂಡಿರುವ ಒಂದು ತಾಲ್ಲೂಕು ಹರಪನಹಳ್ಳಿ ಎಂದರೆ ಅಚ್ಚರಿಪಡಬೇಕಿಲ್ಲ. ಕೆಲವು ತಾಲ್ಲೂಕುಗಳಿಗೆ ಇನ್ನೂ ಪದವಿ ಕಾಲೇಜುಗಳೇ ಇಲ್ಲ.

**ಆರ್ಥಿಕ**

ಇಲ್ಲಿಯ ಮಣ್ಣು ಮರಳು ಮಿಶ್ರಿತ ಕಪ್ಪು ಮತ್ತು ಇಲ್ಲಿ ಹಲವಾರು ಕೆರೆ ಬಾವಿಗಳು ಈಗಲೂ ಕಾಣುವವು ಹರಪನಹಳ್ಳಿ ಪಟ್ಟಣದಲ್ಲಿ ಏಳು ಕೆರೆಗಳಿವೆ. ಇವುಗಳಲ್ಲಿ ಮುಖ್ಯವಾದ ಕೆರೆ ಹಿರೇಕೆರೆ ಈ ಬಾವಿ ಮತ್ತು ಕೆರೆಗಳಲ್ಲಿರುವ ನೀರನ್ನು ಉಪಯೋಗಿಸಿಕೊಂಡು ಹರಪುರದ ಜನತೆ ಕಬ್ಬು, ಭತ್ತ, ರಾಗಿ, ಹತ್ತಿ ಕಡಲೆ, ಶೇಂಗಾ, ಜೋಳ, ಗೋವಿನಜೋಳ, ಹೊಗೆಸೊಪ್ಪು ಹಾಗು ತರಕಾರಿಗಳನ್ನು

ಬೆಳೆದು ಆರ್ಥಿಕವಾಗಿ ಸಫಲತೆಯಿಂದ ಜೀವಿಸುತ್ತಿದ್ದರು. ಆದರೆ ಇಂದಿನ ಕಾಲದಲ್ಲಿ ಮಳೆ ಬಾರದೇ ಕೆರೆ ಒಣಗಿ ಬಿಕೋ ಎನ್ನುತ್ತಿವೆ. ಇಲ್ಲಿಯ ಜನತೆ ವ್ಯಾಪಾರ ಕೃಷಿ ನೌಕರಿ ಅಲ್ಲಲ್ಲಿ ಕೊಳವೆ ಬಾವಿಗಳ ಮೂಲಕ ತೋಟಗಳನ್ನು ನಿರ್ಮಾಣಮಾಡಿಕೊಂಡು ಬಂದ ಹಣದಿಂದ ನೆಮ್ಮದಿಯಿಂದ ಜೀವಿಸುತ್ತಿದ್ದಾರೆ.

ಹರಪನಹಳ್ಳಿ ಅಲ್ಪಸ್ವಲ್ಪ ನೀರಾವರಿಯನ್ನು ಹೊಂದಿದ್ದು ವರ್ಷಕ್ಕೆ ಎರಡು ಬೆಳೆಗಳನ್ನು ಬೆಳೆದು ಆರ್ಥಿಕವಾಗಿ ಸ್ವಲ್ಪ ಸುಧಾರಿಸಿದ ರೀತಿಯಲ್ಲಿರುವುದು ಕಾಣುತ್ತದೆ. ಹಾಗೆಯೇ ಇಲ್ಲಿ ಪ್ರತಿ ಶನಿವಾರ ನಡೆಯುವ ಸಂತೆಗೆ ಸುತ್ತಮುತ್ತಲ ಹಳ್ಳಿಗಳಿಂದ ಜನರು ಬಂದು ತಮಗೆ ಬೇಕಾದ ಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಹಾಗೆಯೇ ಶನಿವಾರದಂದು ನಡೆಯುವ ಮೆಣಸಿನಕಾಯಿವ್ಯಾಪಾರವು ಉತ್ತರ ಕರ್ನಾಟಕದಲ್ಲಿ ಬ್ಯಾಡಗಿಯನ್ನು ಬಿಟ್ಟರೆ ಹರಪನಹಳ್ಳಿಯಲ್ಲಿಯೇ ಜಾಸ್ತಿ. ಇಲ್ಲಿ ಪ್ರತಿ ವಾರ ನಡೆಯುವ ಮೆಣಸಿನಕಾಯಿ ವ್ಯಾಪಾರಕ್ಕೆ ರಾಜ್ಯದ ಪ್ರಮುಖ ಸ್ಥಳಗಳಿಂದ ಖರೀದಿಸಲು ಬರುತ್ತಾರೆ. ಖರೀದಿಮಾಡಿದ ಮೆಣಸಿನಕಾಯಿಯನ್ನು ದೇಶದ ಪ್ರಮುಖ ಪಟ್ಟಣಗಳಾದ ಬಾಂಬೆ, ಬೆಂಗಳೂರು, ಹೈದ್ರಾಬಾದ್, ಮದ್ರಾಸ್ ಮುಂತಾದ ಪಟ್ಟಣಗಳಿಗೆ ಕಳಿಸುತ್ತಾರೆ. ಹಾಗೆಯೇ ಈ ಸಂತೆಯಲ್ಲಿ ಮೆಸಿನಕಾಯಿಯನ್ನು ಮಾರಲು ಹರಪನಹಳ್ಳಿತಾಲೂಕಲ್ಲದೇ ಪಕ್ಕದ ಹೂವಿನಹಡಗಲಿ, ಹರಿಹರ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ದಾವಣಗೆರೆ, ಹೊಸಪೇಟೆ, ಮುಂತಾದ ತಾಲೂಕುಗಳ ಹಳ್ಳಿಗಳಿಂದ ಜನರು ಬರುತ್ತಾರೆ.ಹರಪನಹಳ್ಳಿಯಲ್ಲಿ ಇತ್ತಿಚಿಗೆ ಮೂರು ವರ್ಷದಿಂದ ಕುರಿಗಳ ಸಂತೆಯು ಪ್ರತಿ ಸೋಮವಾರ ನಡೆಯುತ್ತದೆ. ಹರಪನಹಳ್ಳಿಯ ಸುತ್ತಮುತ್ತಲಿನ ಹಳ್ಳಿಯವರು ಪಕ್ಕದ ತಾಲೂಕಗಳಾದ ಹೂವಿನಹಡಗಲಿ. ಹಗರಿಬೊಮ್ಮನಹಳ್ಳಿ, ಹರಿಹರ, ಕೊಟ್ಟೂರು, ಜಗಳೂರು ಹಾಗೂ ದಾವಣಗೆರೆಯಿಂದ ಬಂದು ಕುರಿ ಸಂತೆಯಲ್ಲಿ ಕುರಿ ಮತ್ತು ಆಡುಗಳ ವ್ಯವಹಾರ ನಡೆಯುತ್ತದೆ. ಹರಪನಹಳ್ಳಿ ಸುತ್ತಮುತ್ತಲಿನ ಹಳ್ಳಿಗಳಿಂದ ಬಂದ ರೈತರಿಂದ ಬಂದ ಟೊಮಟೊ ಹಣ್ಣುಗಳನ್ನು ಖರೀದಿಸಿ, ಬಾಂಬೆ, ಹೈದ್ರಾಬಾದ್,ರಾಯಚೂರು, ಗಂಗಾವತಿ, ಸೊಲ್ಲಾಪುರ, ಕೊಲ್ಲಾಪುರ, ಮದ್ರಾಸ್, ಮುಂತಾದ ಪಟ್ಟಣಳಿಗೆ ಕಳಿಸುವುದುಂಟು.

ಹಾಗಾಗಿ ಇಲ್ಲಿಯ ಜನರು ವ್ಯಾಪಾರ ವಹಿವಾಟು ನೀರಾವರಿ ಪ್ರದೇಶವಿದ್ದುದರಿಂದ ಅಲಪ ಮಟ್ಟಿಗೆ ಸಮೃದ್ಧಿಯಿಂದ ಜೀವಿಸುತ್ತಿದ್ದಾರೆಂದು ಹೇಳಬೇಕಾಗುತ್ತದೆ.

**ಸಾಹಿತ್ಯ ಸಮೀಕ್ಷೆ**

ಸಾಹಿತ್ಯಿಕವಾಗಿ ನೋಡಿದರೆ ಹರಪನಹಳ್ಳಿ ಶಾಸ್ತ್ರಿಗಳಿಗೂ ಕವಿಗಳಿಗೂ ಕಲಾವಿದರಿಗೂ ನೆಲೆವೀಡಾಗಿದೆ. ಹರಪನಹಳ್ಳಿ ಭೀಮವ್ವ ಜನಿಸಿದ್ದು ನಾರಾಯಣದೇವರಕೆರೆ ಗಂಡನಮನೆ ಹರಪನಹಳ್ಳಿ ಎಂದು ತಿಳಿಯುತ್ತದೆ. ಸರ್ವಜ್ಞನ ಸಿದ್ಧಾಂತದ ಸಾರ್ಥಕ ಸಮರ್ಥ ಮಹಿಳಾ ಮಣಿಯೆನಿಸಿಕೊಂಡ ಹರಪನಹಳ್ಳಿ ಭೀಮವ್ವ ಹರಿಭಕ್ತಿಯ ಸಾಕಾರಮೂರ್ತಿ, ವನಿತಾ ವಾಙ್ಮಯದ ಚಾತುರ್ಯ ಮಾಧುರ್ಯಗಳ

ರೀತಿ–ನೀತಿಗಳನ್ನು ವಿಶ್ವವ್ಯಾಪಿಯಾಗುವಂತೆ ವಿಶಿಷ್ಟವಾಗಿ ನೀಡುತ್ತಾ ಸಿದ್ಧಾಂತ ಸಾಧನೆಯ ಉನ್ನತ ಮಾರ್ಗದಲ್ಲಿ ನಡೆದ ೨ ಭೀಮವ್ವ ವಾಕ್ಸಿದ್ಧಿಯ ಪ್ರಚಂಡಶಕ್ತಿ ಕಾವ್ಯಶುದ್ಧಿಯ ಅಪೂರ್ವ ವ್ಯಕ್ತಿ ಕನ್ನಡ ಪದ ಪದ್ಯ ದೇವರನಾಮಗಳ ಮೂಲಕ ಭಕ್ತಿ ಭಾಗೀರತಿಯ ಚೇತೋಹಾರಿ ಪ್ರವಾಹವನ್ನು ಹರಿಸುತ್ತಾ ತಮ್ಮ ಕೃತಿಗಳ ಭಕ್ತಿ ಕುಸುಮದಿಂದ ಭಗವಂತನನ್ನು ಪರಿಪರಿಯಾಗಿ ಅಲಂಕರಿಸಿ ಆರಾಧಿಸುತ್ತಾ ತಮ್ಮ ಕಾವ್ಯಶೈಲಿಯ ಅರ್ಥ ಸೌಂದರ್ಯದ ರಮ್ಯ ರಮಣೀಯ ಸಾಹಿತ್ಯದ ಶ್ರೀಕೃಷ್ಣನ ಮಂದಹಾಸವೆನ್ನಲು ಹೂ ಹರಸಿಹ ಹಾಸು ಹಸೆಯನ್ನಾಗಿ ಮಾಡಿಕೊಟ್ಟಿದ್ದಾರೆ. ಭಗವಂತನ ಲೀಲಾ ವಿಲಾಸಗಳನ್ನೇ ತಮ್ಮ ಹಾಡುಗಳಲ್ಲಿ ವಿಕಾಸಮಾಡುತ್ತಾ ಅವರ ಅಪಾರ ಮಹಿಮೆಗಳನ್ನು ರಸಭರಿತವಾದ ಸುಧೆಯಾಗಿ ಚಿಮ್ಮಿಸಿದ ಹರಪನಹಳ್ಳಿ ಭೀಮವ್ವ ಮಹಿಳೆಯರಿಗೆ ಆದರ್ಶ ನಾರಿಮಣಿ. ಭೀಮವ್ವನನ್ನು ಗಂಡನ ಮನೆಯಲ್ಲಿ ಕೃಷ್ಣಾಬಾಯಿ ಎಂದು ಕರೆಯುತ್ತಿದ್ದರು ಈ ಎರಡು ಹೆಸರುಗಳನ್ನು ಸೇರಿಸಿ

"ಭೀಮೇಶಕೃಷ್ಣ" ಎಂಬ ಅಂಕಿತದಲ್ಲಿ ಭಕ್ತಿ ಕುರಿತು ಪದ, ಪದ್ಯ ಹಾಡಲಿಕ್ಕೆ ಪ್ರಾರಂಭಿಸಿದಳು ಎಂದಿದ್ದಾರೆ. ಒಂದು ದಿನ ಸ್ವಪ್ನದಲ್ಲಿ ತಂಬೂರಿಸಹಿತವಾಗಿ ೪೮ ಜನ ಬ್ರಾಹ್ಮಣರ ಮಧ್ಯದಲ್ಲಿ ಕುಳಿತಿದ್ದಳು. ಅವರು ಎದ್ದು ಹೊರಟಾಗ ತಾನು ಹೊರಟಳು ಹೋಗುತ್ತಾ ಹೋಗುತ್ತಾ, ಎಲ್ಲರೂ ಪ್ರಾಣ ದೇವರು ದೇವಾಲಯ ಹೊಕ್ಕರು ಒಳಗೆ ಕುಳಿತು ತಂಬೂರಿ ಮೀಟುತ್ತಾ

ಯಾತಕವನಿಯೋಳು ಜನಿಸಿದೆ ನಾನು, "ಸಾರ್ಥಕವೇನು"
ನೀತಿಯಿಲ್ಲದ ಮಾತಿನಲ್ಲೇ ಕಾಲ ಕಳೆಯುವೆ ನಾನು,
"ಕೋತಿ ಸಾರ್ಥಕವೇನು?"
ಬಿಟ್ಟು ಚಲಿಸದೇ ನಿನ್ನಲ್ಲೋ ಮನಸಿಟ್ಟೆನೇನೋ
ವಾಶಿಷ್ಠ ಭೀಮೇಶ ಕೃಷ್ಣನ ಭಜಿಸುತ್ತಿರುವೆನೇನು,
"ಕೋತಿ ಸಾರ್ಥಕವೇನು."

ಕನ್ನಡ ಸಾಹಿತ್ಯದಲ್ಲಿಯೇ ತಮ್ಮ ನುಡಿಯ ಹಾಡುಗಳ ಮೂಲಕ ಹೆಂಗಸರು ಪಡೆದಾಕೆ ಹರಪನಹಳ್ಳಿ ಭೀಮವ್ವ ಹೆಂಗಸರು ಹಾಡದೇ ಇರುವಂತಹ ಕಾಲದಲ್ಲಿ ಸಮಾಜದ ಒಳಗಡೆ ಭವಭಂಧನವನ್ನು ಮೀರಿ ಜನಪದ ಶೈಲಿಯ ತತ್ವ , ಭಜನೆ ಪದಗಳನ್ನು ಹಾಡಿ ರಂಜಿಸಿದವಳು.

ಎಂದು ಈ ಮುದ್ರಿಕೆ ಹಾಕಿದ ಪದ ನುಡಿದು ಪ್ರಾಣ ದೇವರ ಮೂರು ಅವತಾರಗಳ ವರ್ಣನೆ ಹಾಡಿ ಹರಿವಾಯುಗಳ ಈ ಮುದ್ರಿಕೆ ಪರಮಾನುಗ್ರಹ ಪೂರ್ಣವಾಗಿದೆ. ಎಂದು ನುಡಿದಂತೆ ಆಯಿತೆ ಹೀಗೆ ಮಣಿಮಾಲಿಕೆ ಪತಿದಾನದ ಹಾಡು ಕುಬಸದ ಹಾಡು ಹಲವಾರು ಪದಗಳನ್ನು ಹಾಡಿ ಸಾಹಿತ್ಯಾಸಕ್ತರ ಮನಸ್ಸನ್ನು ಗೆದ್ದಿದ್ದಾಳೆ. ೩

ಹರಪನಹಳ್ಳಿ ಮರಿಕೊಟ್ರಪ್ಪಯ್ಯಶಾಸ್ತ್ರಿ ಹರಿಯಮ್ಮನಹಳ್ಳಿ ಇವರು ಶಾಸ್ತ್ರೀಯ ಸಂಗೀತ ವಿದ್ವಾಂಸರು ಉತ್ತರ ಭಾರತದಲ್ಲಿ ಸಂಚರಿಸಿ, ಉತ್ತರಾದಿ ಸಂಗೀತವನ್ನು ಅಭ್ಯಾಸಿಸಿದರು. ದೇಶದ ವಿವಿಧ ಪ್ರದೇಶದಲ್ಲಿ

ಸಂಗೀತ ಕಛೇರಿಗಳನ್ನು ನಡೆಸಿದರು ಗ್ವಾಲಿಯಾರ್ ಅರಸನಿಂದ ಗಂಧರ್ವ ಕುಲತಿಲಕನೆಂಬ ಬಿರುದನ್ನು ಪಡೆದರು ಆಮೇಲೆ ಇಲ್ಲಿಯೇ ಇನ್ನೊಬ್ಬ ಹಾಸ್ಯ ಕವಿ ಬಾಳಿ ಬೆಳಗಿದ್ದಾರೆ "ಭೀಮಸೇನರಾವ್ ಚಿದಂಭರ (ಭೀಛಿಜ) ಅವರು ಎಸ್.ಎಸ್.ಎಲ್.ಸಿ. ವರೆಗೆ ಓದಿ ಪೊಲೀಸ್ ಇಲಾಖೆಯಲ್ಲಿ ಅನುಚರರಾಗಿ, ಗುಮಾಸ್ತರಾಗಿ, ಕಾರ್ಯನಿರ್ವಹಿಸಿ ಒಟ್ಟಿಗೆ ೫೯ ಚಿಕ್ಕ ಕಥೆಗಳ ಸಂಕಲನ ಬರೆದಿರುವರು ಇವರು ಬರೆದಿರುವ ಸರಸ್ವತಿಯ ಸಂವಾದ ತೆಲಗು ಭಾಷೆಗೆ ಭಾಷಾಂತರವಾಗಿದೆ. ದೇವರಿಲ್ಲದ ಗುಡಿ ಆಂಗ್ಲ ಭಾಷೆಗೂ ಭಾಷಾಂತರಗೊಂಡಿದೆ. ಇವರು ರೈತನ ಕುರಿತು ಹೇಳುವಾಗ "ನಗುವೆಬಾಳು ಅಳುವೆ ಗೋಳು" ಎಂಬುದನ್ನು ರೈತ ಅರಿತಿದ್ದಾನೆ. "ಸಾಯುವವರೆಗೂ ಬದುಕಿರೋಣ ಬದುಕಿರುವವರೆಗೂ ನಗು ನಗುತಲಿರೋಣ" ಎಂಬ (ಭೀಛಿಜ) ಅವರ ನುಡಿಯಂತೆ ರೈತ ಜೀವಿಸುತಿದ್ದಾನೆ.

ಇವರು ರಚಿಸಿದ ತಿಮ್ಮನ ತಲೆ ನಗೆಬರಹ ಸಂಗ್ರಹಕ್ಕೆ ಕ್ರಿ.ಶ. ೧೮೫೭ ರಲ್ಲಿ ಮದ್ರಾಸ್ ಸರ್ಕಾರದಿಂದ ಪ್ರಶಸ್ತಿ, ಹಾಗೂ ಇನ್ನೂ ಅನೇಕ ಪ್ರಶಸ್ತಿಗಳು ಇವರಿಗೆ ಲಭಿಸಿವೆ.

### ಟಿಪ್ಪಣಿಗಳು

೧. ಜ್ಞಾನದೀವಟಿಗೆ : ಪುಟ – ೪೮
೨. ಬಳ್ಳಾರಿ ಜಿಲ್ಲಾ ಸಾಂಸ್ಕೃತಿ ದರ್ಶನ; ಪುಟ –೧೫೧
೩. ಹರಪನಹಳ್ಳಿ ಭೀಮವ್ವನ ಹಾಡುಗಳು : ಪುಟ – ೬

## ಅಧ್ಯಾಯ: ಮೂರು

# ಹರಪನಹಳ್ಳಿ ತೆಗ್ಗಿನಮಠದ ಹುಟ್ಟು ಮತ್ತು ಬೆಳವಣಿಗೆ

ಯಾವುದೇ ದೃಷ್ಠಿಯಿಂದ ನೋಡಿದರೂ ಮಠವೆಂದರೆ ಆಧ್ಯಾತ್ಮಿಕ ಕೇಂದ್ರವೆಂಬುದು ಸರಿಯಾದ ಅರ್ಥವೆನಿಸುತ್ತದೆ. ಕಾನೂನಿನ ವ್ಯವಹಾರಗಳಲ್ಲಿ ಮಠವೆಂದರೆ ಆತ್ಮವಿದ್ಯೆಯಲ್ಲಿ ಸಾಧನೆಯನ್ನು ಗಳಿಸಿದ ಒಬ್ಬ ಮಹಾವ್ಯಕ್ತಿಯ ಹಿರಿತನದಲ್ಲಿ ನಡೆಯುವ ಒಂದು ಧಾರ್ಮಿಕ ಸಂಸ್ಥೆ  ೧(ಅರ್ಚನ ಡಾ. ಜಿ.ಎಸ್. ಎಸ್. ಮಟ ಸಂಖ್ಯೆ ೧೦೦೫)

"ನಕ್ಕ ಊರು ಪಟ್ಟಣವಾದೀತು" ಎನ್ನುವ ನಾಣ್ನುಡಿಯನ್ನು ಸತ್ಯಗೊಳಿಸುವಂತೆ ಇಂದಿನ ಹರಪನಹಳ್ಳಿ ವಿದ್ಯಾ ಧರಿತ್ರಿಯಾಗಿರುವುದನ್ನು ಕಾಣಬಹುದಾಗಿದೆ. ಅಷ್ಟೆ ಅಲ್ಲದೇ ಪಕ್ಕದ ಊರಿನ ಜಾನಪದ ಸ್ತ್ರೀ ಅಳಿಯ ಅಥವಾ ತಮ್ಮ ಯಾವುದೇ ಕೆಲಸದ ನಿಮಿತ್ತ ಬಂದಾಗ ಅಥವಾ ಬರುವ ಸಂದರ್ಭದಲ್ಲಿ ಮಗಳನ್ನು ನಿನ್ನ ಜೊತೆಗೆ ಹಬ್ಬಕ್ಕೆ ಕರೆದುಕೊಂಡು ಬಾ ಎಂದು ಅಳಿಯನಿಗೆ ತ್ರಿಪದಿಯ ಮೂಲಕ ಹೀಗೆ ಹೇಳುತ್ತಾಳೆ.

"ಹರಪನಹಳ್ಳಿ ಗೌಡ ಅರಿತು ಮರೆತು ಬಾರ  
ಬರುತ ನನ ಮಗಳ ಕರೆತಾರ! ತರದಿದ್ರೆ  
ತರುಬೇನ ನಿನ್ನ ಮುಖ ಹಿಡಿದು"

ಗರತಿ ತನ್ನ ತ್ರಿಪದಿಯಲ್ಲಿ ಹೇಳುವಂತೆ ಮದುವೆ ಮಾಡಿಕೊಟ್ಟ ಮಗಳಿಗೆ ತವರಿನ ಹಬ್ಬಕ್ಕೆ ಜಾತ್ರೆಗೆ ಕರೆತರಬೇಕೆಂದು, ಕರೆಕೊಡುತ್ತಾಳೆ. ಒಂದು ಕಾಲದಲ್ಲಿ ಊರಿನ ಪ್ರಭುತ್ವ ಗೌಡನಿಂದಲೇ ನಡೆಯುತಿತ್ತು. ಅವನಲ್ಲಿ ನಿವೇದಿಸಿಕೊಂಡ ತ್ರಿಪದಿ ಇದಾಗಿದೆ.

ಜೀವನದಲ್ಲಿ ಸುಖ ದುಃಖ, ಕಷ್ಟ ನಷ್ಟಗಳು ಸಹಜ ಅವೆಲ್ಲವನ್ನು ಮರೆತು ೧೨ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಗೆ ಮಗಳನ್ನು ಮರೆಯದೇ ಕರೆದುಕೊಂಡು ಬಾ ಎಂದು ತಾಯಿ ಮಗಳ ಮೇಲಿನ ಅಕ್ಕರೆಯನ್ನು ವ್ಯಕ್ತಪಡಿಸುತ್ತಾಳೆ. ಹಾಗೂ ದಾವಣಗೇರೆ ಜಿಲ್ಲೆಯಲ್ಲಿ ಹರಪನಹಳ್ಳಿ ವಿಶಿಷ್ಠ ಸ್ಥಾನ ಪಡೆದಿದೆ. ವಿಜಯನಗರ ಅರಸರ ಮಾಂಡಲೀಕರಾಗಿದ್ದ ನಾಯಕ ವಂಶದ ಅರಸರು ಕ್ರಿ.ಶ. ೧೫೫೭ರಿಂದ ೧೮೨೦ ರವರೆಗೆ ಇಲ್ಲಿ ಆಡಳಿತ ನಡೆಸಿದರು ರಾಜಸೋಮಶೇಖರ ನಾಯಕನು ಅರಸೊತ್ತಿಗೆಯ ಆಸೆ ಇಲ್ಲದೇ ಧರ್ಮಕ್ಕೆ ಒತ್ತು ಕೊಟ್ಟು ಆ ನಾಡನ್ನು ಬೆಳೆಸಿದ ಅದಕ್ಕೆ ಸಾಕ್ಷಿಗಳೆನ್ನುವಂತೆ ಅವರು ಕಟ್ಟಿಸಿಕೊಟ್ಟ ಮಠಗಳು ದೇವಾಲಯಗಳು ಇಂದಿಗೂ ಎದ್ದು ಕಾಣುತ್ತವೆ. ಅಳುದುಳಿದ ಇತಿಹಾಸವನ್ನು

ಸಾರುವ ಒಂದು ದೊಡ್ಡ ಕೆರೆ ಹಾಳುಬಿದ್ದ ಜೈನಬಸದಿ ಕೋಟೆಕೊತ್ತಲುಗಳು ವೀರಗಲ್ಲುಗಳು, ಮಾಸ್ತಿಕಲ್ಲುಗಳು ಇತ್ಯಾದಿ ಸಾಕ್ಷಿಯಾಗಿ ನಿಂತಿವೆ.

ಪ್ರಸ್ತುತ ವಿದ್ಯಾಮಾನಗಳಲ್ಲಿ ಶಿಕ್ಷಣ ಹಾಗೂ ಧರ್ಮ ಜಾಗೃತಿಯನ್ನು ಒಟ್ಟೊಟ್ಟಿಗೆ ಕೊಂಡೊಯ್ಯುವ ಮಠಗಳು ಅತ್ಯಂತ ವಿರಳ ಆದರೆ ವೀರಶೈವ ಮಠಗಳು ಇದಕ್ಕೆ ಹೊರತಾಗಿವೆ. ಕರ್ನಾಟಕದ ಧಾರ್ಮಿಕ ಸಾಮಾಜಿಕ ಸಾಹಿತ್ಯಿಕ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ಮಠಗಳು ನೀಡಿದ ಕೊಡುಗೆ ಅಪಾರ. ಸರ್ವ ಸಮಾನತೆಯ ನೆಲಗಟ್ಟಿನ ಮೇಲೆ ಮಾನವೀಯ ಮೌಲ್ಯಗಳ ಬೀಜಗಳನ್ನು ಬಿತ್ತುತ್ತಾ ನಿಜಧರ್ಮದ ಬೆಳಕನ್ನು ನೀಡಿದ್ದಲ್ಲದೆ ದೀನ ದಲಿತರಿಗೆ ನ್ಯಾಯ ದೊರಕಿಸಿಕೊಡುವಲ್ಲಿ ಹಾಗೂ ಆತ್ಮ ಗೌರವಮೂಡುವಂತೆ ಮಾಡುವಲ್ಲಿ ವೀರಶೈವ ಮಠಗಳು ಕಂಕಣಬದ್ಧವಾಗಿ ಶ್ರಮಿಸುತ್ತಿವೆ.

ಮಠಗಳ ಪರಿಕಲ್ಪನೆ ಭಾರತೀಯರಲ್ಲಿ ತುಂಬಾ ಹಳೆಯದು ಮಠಗಳು ಸನ್ಯಾಸಿಗಳ ಮುನಿಗಳ ಆವಾಸಸ್ಥಾನ ಜ್ಞಾನದ ದೀಕ್ಷಾಸ್ಥಾನ. ಹಲವಾರು ಸನಾತನ ಶಾಸ್ತ್ರ ಶಿಸ್ತುಗಳು ಅಧ್ಯಯನದ ಕೇಂದ್ರಗಳು ವೈದಿಕ ದೇವಾಲಯಗಳಂತೆ ಮಠಗಳು ದೇವಸ್ಥಾನಗಳಲ್ಲಿ  ಅವು ವಿದ್ಯೆಯ ಜ್ಞಾನದ ವೈಚಾರಿಕತೆಯ ಚಿಂತನೆಯ ವೇದಗಳು ಸಮಾಜದ ಸಮಷ್ಠಿಯ ಬಗೆಗಿನ ತಾತ್ವಿಕ ಚರ್ಚೆಗಳು, ಉಪನ್ಯಾಸಗಳು ಪ್ರವಚನಗಳು, ಪುರಾಣ ಪಠಣ ಮುಂತಾದವುಗಳ ಚಟುವಟಿಕೆಗಳ ಕ್ರಿಯಾಶೀಲ ಶಕ್ತಿ ಕೇಂದ್ರಗಳು ಇತಿಹಾಸದ ಕಣ್ಣಲ್ಲಿ ಅವು ತೀರಾ ಅನುಪಲಬ್ಧವಾಗಿವೆ. ಇದಕ್ಕೆ ಬೇರೆ ಬೇರೆ ಕಾರಣಗಳಿರಬಹುದು ಭಾರತೀಯರಲ್ಲಿದ್ದ ಇತಿಹಾಸದ ಆವಜ್ಞೆಗೆ ಇವು ಗುರಿಯಾಗಿವೆ. ಒಂದು ವರ್ಗದ ಷಡ್ಯಂತ್ರಕ್ಕೆ ಗುರಿಯಾಗಿ ಮಠ ಮಾನ್ಯಗಳು ಚರಿತ್ರೆಯ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಂಡಿಲ್ಲ. ಅಂದ ಮಾತ್ರಕ್ಕೆ ಅವು ಇರಲಿಲ್ಲವೆಂದಲ್ಲ ಮಧ್ಯಯುಗೀನ ಭಾರತೀಯ ಚರಿತ್ರಾರಂಭದಿಂದ ಮಠಗಳ ಪಾತ್ರ ಸಮಾಜದಲ್ಲಿ ಹಿರಿದಾಗಿತ್ತು ಎಂಬುದಂತೂ ಸತ್ಯ. ಇದಕ್ಕೆ ನಮ್ಮ ಚರಿತ್ರೆಯಲ್ಲಿ ಹಲವಾರು ಪ್ರಮಾಣಗಳು ಸಿಗುತ್ತವೆ.

> ನಿಂಬಿಯ ಹಣ್ಣ ಗೆದ್ದ ! ನಿಂಬಿಯ ಕಾಯಿ ಗೆದ್ದ ! ನಿಂಬಿಯ
> ಏಳು ಗೊನಿಗೆದ್ದ ! ನಿಂಬಿಯ ಏಳು ಗೊನಿಗೆದ್ದ
> ನನ್ನ ! ಮಗ ಧರ್ಮ ಗೆದ್ದ ! ಗಳಿಗ್ಯಾಗ

ಹೀಗೆ ಹೇಳುತ್ತಾ ಸಂಸಾರ ಹೇಯವೆಂದು ತಿಳಿದು ಅದರಲ್ಲಿ ಆಸಕ್ತಿ ಕಡಿಮೆಯಾದಾಗ ಸನ್ಯಾಸ ಜೀವನ ಕಡೆ ಮನಸ್ಸು ವಾಲುತ್ತದೆ. ಅಲ್ಲಿಂದ ಮೋಕ್ಷದ ಹಂಬಲ ಆರಂಭವಾಗುತ್ತದೆ. ಎಂಬ ನಂಬಿಕೆ ಇದೆ. ಈ ವಿಚಾರ ಕೂಡಾ ಸತ್ಯ ಭಾರತೀಯ ಸಂಸ್ಕೃತಿಯುಲ್ಲಿ ಮನುಷ್ಯನಿಗೆ ನಾಲ್ಕು ಆಶ್ರಮಗಳು ಲಭ್ಯವಾಗಿವೆ. ಅವುಗಳಲ್ಲಿ ಬ್ರಹ್ಮಚರ್ಯ ಗೃಹಸ್ಥಾಶ್ರಮಗಳು ಒಬ್ಬ ವ್ಯಕ್ತಿಯನ್ನು ಜೀವನ್ಮುಖಿಯಾಗಲು ಅಥವಾ ಲೌಕಿಕವಾಗಲು ಸಿದ್ಧಗೊಳಿಸುತ್ತವೆ. ಉಳಿದ ಎರಡು ಆಶ್ರಮಗಳು ಅಂದರೆ ವಾನಪ್ರಸ್ಥ ಮತ್ತು ಸನ್ಯಾಸಾಶ್ರಮಗಳು ನಿವೃತ್ತಿ ಮಾರ್ಗ ಅಥವಾ ಪಾರಮಾರ್ಥಿಕ ಜೀವನಕ್ಕೆ ಅನುವು ಮಾಡಿಕೊಡುತ್ತವೆ.

## ೩.೧ ಸನ್ಯಾಸ

ಸ್ಥೂಲವಾಗಿ ಹೇಳುವುದಾದರೆ ಈ ಆಶ್ರಮದ ಹಂತಗಳು ವ್ಯಕ್ತಿಯ ಮಾನಸಿಕ ವಿಕಾಸದ ಹಂತಗಳಾಗಿರಲೂಬಹುದು. ಸಂಸ್ಕೃತದಲ್ಲಿ "ನ್ಯಾಸ" ಎಂದರೆ ತ್ಯಜಿಸು ಎನ್ನುವ ಅರ್ಥವಿದೆ. ಸನ್ಯಾಸ ಎಂದರೆ ಸರ್ವರನ್ನು ತ್ಯಜಿಸು ಸನ್ಯಾಸಿಯು ಜೀವನದ ಸುಖ ದು:ಖಗಳೆಂಬ ದ್ವಂದ್ವ ಅನುಭವಗಳಿಗೆ ಅತೀತನಾಗಿ ಕಾಮ ಕ್ರೋದಾಧಿ ಮೊದಲಾದ ಅರಿಷಡ್ವರ್ಗಗಳನ್ನು ನಿಗ್ರಹಿಸುತ್ತಾ ಜೀವನದ ಪರಮ ಗುರಿಯಾದ ಮೋಕ್ಷ ಪಡೆಯಲು ಸಾಧನೆ ಮಾಡುತ್ತಾನೆ. ಭಾರತೀಯ ಸನ್ಯಾಸ ಜೀವನದ ಲಕ್ಷ್ಯ ಮತ್ತು ಲಕ್ಷಣ ಇದೆ ಆಗಿದೆ. ಭಗವದ್ಗೀತೆಯಲ್ಲಿ ಹೇಳುವಂತೆ "ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವವನು ಆತ್ಮಜ್ಞಾನಿಯಾಗಿರುವನು. ಕಾಮಕ್ರೋಧಾದಿಗಳಿಂದ ಬಿಡುಗಡೆಯನ್ನು ಪಡೆದಿರುವನು ನಿಜವಾದ ಯತಿ ಅಥವಾ ಮುನಿ ಎಂದು ಸನ್ಯಾಸದ ಹಿರಿಮೆಯನ್ನು ಸಾರುತ್ತದೆ. ಭಾರತೀಯರ ಜೀವನದ ಧ್ಯೇಯ ಹಾಗೂ ಅಂತಿಮ ಗುರಿ ಮೋಕ್ಷ ಎನ್ನುವ ನಂಬಿಕೆ ಇದೆ. ಲೌಕಿಕ ಬಂಧನವನ್ನು ತ್ಯಜಿಸಿ ಪರಮಾರ್ಥಿಕ ಆನಂದವನ್ನು ಪಡೆಯುವುದೇ ಜೀವನದ ಪರಮ ಉದ್ದೇಶ. ಮಾನವನ ಹುಟ್ಟು ಸಾವುಗಳ ಬಂಧನದಿಂದ ಬಿಡುಗಡೆ ಹೊಂದಿ ಪರಮಾತ್ಮನೊಂದಿಗೆ ಸಮರಸನಾಗಿ ಬೆರೆಯುವುದೇ ಮುಕ್ತಿ ಅಥವಾ ಮೋಕ್ಷ ಇದನ್ನು ಪಡೆಯುವ ಉದ್ಧೇಶವೆ ಸನ್ಯಾಸ. ಇದು ನಮ್ಮ ಪರಂಪರೆಯಿಂದ ಬಂದ ಪರಿಕಲ್ಪನೆ, ಮಠಗಳ ಇತಿಹಾಸವನ್ನು ಸ್ಪಷ್ಟವಾಗಿ ತಿಳಿಯಲು ಆಧಾರಗಳು ಅಸ್ಪಷ್ಟವಾಗಿವೆ. ಮಠಗಳ ಆರಂಭದ ಕಾಲವನ್ನು ನಿರ್ಧಿಷ್ಟವಾಗಿ ಹೇಳಲಾಗದು, ಚರಿತ್ರೆಯ ಆವಜ್ಞೆಗೆ ಗುರಿಯಾಗಿದೆ. ಪ್ರಾಯಶಃ ಮೊದಲು ಸನ್ಯಾಸಿಗಳಾಧ್ಯಾತ್ಮ ಸಾಧನೆಗೆ ಕೆರೆ ಮತ್ತು ನದಿ ತಟಗಳಲ್ಲಿ ಆರಂಭವಾಗಿದ್ದಿರಬೇಕು ಎನಿಸುತ್ತದೆ.

ಮಠ ಈ ಪದದ ಉಲ್ಲೇಖವನ್ನು ಪ್ರಪ್ರಥಮವಾಗಿ ಬೌದ್ಧ ಸಾಹಿತ್ಯದಲ್ಲಿ ಕಾಣತ್ತೇವೆ. ವೇದಾಧ್ಯಯನ ದೇವಪೂಜೆ ದಾನ ಧರ್ಮ ಪರೋಪಕಾರಗಳು ಜ್ಞಾನದೀಕ್ಷೆ ಮುಂತಾದ ಚಟವಟಿಕೆಗಳು ನಡೆಯುತ್ತವೆಯೋ ಯಾವೂದು ಬ್ರಹ್ಮ ಜ್ಞಾನಿಗಳಾದ ಸನ್ಯಾಸಿಗಳಿಗೆ ಆಶ್ರಯತಾಣವೋ ಅದೇ ಮಠ ಎಂಬುದು ಅಭಿಮತ.

ಮಠವನ್ನು ಕುರಿತು ಹಲವಾರು ವಿದ್ವಾಂಸರು ಹಲವಾರು ರೀತಿಯಲ್ಲಿ ಹೇಳುತ್ತಾರೆ ಇಂಗ್ಲೀಷನಲ್ಲಿ ಮಠಕ್ಕೆ Monasfories ಎಂದು ಕರೆಯಲಾಗುತ್ತದೆ. ಸಂಸ್ಕೃತದಲ್ಲಿ ಮೆಕ್‌ಡೊನೆಲ್ ಅವರು ಮಠದ ಪರಿಭಾಷೆಗೆ ಅರ್ಥವನ್ನು ನೀಡುವಾಗ ಬೈರಾಗಿ ಅಥವಾ ವಿದ್ಯಾರ್ಥಿಗಳ ವಾಸಸ್ಥಾನ ಧಾರ್ಮಿಕ ವಿಷಯಗಳ ಅಧ್ಯಯನ ಕೇಂದ್ರ ಅಥವಾ ಗುರುಕುಲವೆಂದು ತಿಳಿಸುತ್ತಾರೆ. ಆಪ್ಟೆಯವರು ಹಿಂದಿ ಕೋಶದಲ್ಲಿ ಮಠವನ್ನು ಸನ್ಯಾಸಿಯ ಕೊಠಡಿ ಸಾಧನದ ಕುಟೀರ , ವಿಹಾರ ಶಿಕ್ಷಾಲಯ ವಿದ್ಯಾಮಂದಿರ, ಮಹಾವಿದ್ಯಾಲಯ, ಜ್ಞಾನಪೀಠ, ದೇವಾಲಯ, ಮಂದಿರ ಇತ್ಯಾದಿ ಅರ್ಥವನ್ನು ನೀಡುತ್ತಾರೆ.[೨]

ರಾಜಸೋಮಶೇಖರನ ಕಾಲಕ್ಕೆ ತೆಗ್ಗಿನ ಮಠವು (ಹಿರೇಮಠ) ಮೊದಲು ಕೋಟೆಯಲ್ಲಿ ಈಗಿನ ಕಾಳಮ್ಮನ ದೇವಸ್ಥಾನದ ಬಲಭಾಗದಲ್ಲಿ ಇತ್ತು. ಈ ಮಠದ ಅಂದಿನ ಗುರುಗಳು ರಾಜರಿಗೆ

ಧರ್ಮೋಪದೇಶ ಮಾಡುತ್ತಿದ್ದು ಅವರ ಸೇವೆಗೆಂದು ಶ್ರೀಮಠಕ್ಕೆ ರಾಜನು ಭೂಮಿಯನ್ನು ದತ್ತಿ ಕೊಟ್ಟಿದ್ದನೆಂದು ಗ್ರಾಮದ ಹಿರಿಯರು ಇಂದಿಗೂ ಹೇಳುತ್ತಾರೆ. ತೆಗ್ಗಿನ ಮಠವು ಪಂಚಪೀಠಗಳಲ್ಲಿ ಒಂದಾದ ಶ್ರೀ ೧೦೦೮ ಶ್ರೀಮದ್ ರಂಭಾಪುರಿ ಪೀಠದ ಶಾಖಾಸೂತ್ರಾದಿಗಳಿಂದ ಕೂಡಿದ್ದು. ಇದು ಪುತ್ರವರ್ಗದ ಪರಂಪರೆಯ ಬಳವಳಿಯಾಗಿದೆ. ಇದರ ಶಾಖಾಮಠಗಳು ಇಂದಿಗೂ ನಾಗತಿಬಸಾಪುರ ಹೂವಿನಹಡಗಲಿ, ಕೋಯಿಲಾರಗಟ್ಟಿ, ಭವಾನಿಪೇಟೆ ಗೌರಿಪುರ ಗ್ರಾಮಗಳಲ್ಲಿರುವವು ಅಲ್ಲಿ ಹಿಂದಿನ ಗುರುಗಳವರ ಗದ್ದುಗೆಗಳಿದ್ದು, ಜಾಗ್ರತ ಸ್ಥಾನವಾಗಿದೆ. ಪೂರ್ವದಿಂದಲೂ ಈ ಮಠಕ್ಕೆ ಪರಂಪರೆಯಾಗಿ ಅನೇಕ ಪಟ್ಟಾಧಿಕಾರಿಗಳು ಆಗಿದ್ದರು ಅವರಲ್ಲಿ

(೧) ಶ್ರೀ ಕಾಶಯ್ಯಸ್ವಾಮಿ

(೨) ಶ್ರೀ ಚನ್ನವೀರಸ್ವಾಮಿ

(೩) ಶ್ರೀ ಗುರುಬಸವ ಮಹಾಸ್ವಾಮಿಗಳು

(೪) ಶ್ರೀ ಚಂದ್ರಶೇಖರಸ್ವಾಮಿ

ಮುಂತಾದವರ ಕೆಲವು ಹೆಸರುಗಳು ಮಾತ್ರ ದೊರೆತಿವೆ ಒಟ್ಟಾರೆ ಹೇಳುವುದಾದರೆ ನ್ಯಾಯದಲ್ಲಿ ನಿಷ್ಠೂರ, ಸಮಾಜದ ಬಗ್ಗೆ ಕಳಕಳಿ, ಭಕ್ತರ ಬಗ್ಗೆ ಅಪಾರ ಪ್ರೇಮ ಇವುಗಳನ್ನು ಉಳಿಸಿಕೊಳ್ಳುವುದರ ಜೊತೆಗೆ ಸಾಹಿತ್ಯ ಸಂಗೀತ, ಕಲೆ ಜ್ಯೋತಿಷ್ಯ ವೈಧಿಕ, ಔಷದೋಪಚಾರ ಅನ್ನದಾಸೋಹ ಇವುಗಳನ್ನು ಬೆಳೆಸಿಕೊಂಡು ಬಂದ ಕೀರ್ತಿ ರಾಜರ ಕಾಲದಿಂದ ಇಂದಿನವರೆಗೂ ಸಲ್ಲುತ್ತದೆ. ಇತ್ತೀಚಿನ ದಿನಗಳಲ್ಲಿ ವಿದ್ಯಾ ಕ್ಷೇತ್ರವು ಶ್ರೀಮಠದ ಪರಂಪರೆಯ ದಿವ್ಯ-ಚೇತನರಾದ ಶ್ರೀ ಚಂದ್ರಮೌಳೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳಿಂದ ಬೆಳಗಿದೆ ಎನ್ನುವುದು ಕನ್ನಡಿಗರಿಗೆ ಕಾಣುವ ನೋಟ

**ಹುಟ್ಟು**

ವೀರಶೈವ ಪರಂಪರೆಯಲ್ಲಿ ಪಂಚಪೀಠಗಳು ಅವಿಸ್ಮರಣೀಯ ಕಾರ್ಯ ಸಾಧಿಸಿದ ಮರೆಯಲಾಗದ ಮಹಾ ಚೈತನ್ಯಗಳಾಗಿದೆ. ಶ್ರೀಮದ್ ರಂಭಾಪುರಿ, ಶ್ರೀಮದ್ ಉಜ್ಜನಿ, ಶ್ರೀಮದ್ ಕೇದಾರ, ಶ್ರೀಮದ್ ಶ್ರೀಶೈಲ, ಶ್ರೀಮದ್ ಕಾಶಿ, ಈ ಐದು ಪೀಠಗಳು ಸಾವಿರಾರು ಶಾಖಾ ಮಠಗಳನ್ನು ನಾಡಿನ ಉದ್ದಗಲಕ್ಕೂ ಹೊಂದಿವೆ. ಈ ಮಠಗಳಲ್ಲಿ ಶಿವಾಚಾರ್ಯರುಗಳಿದ್ದು ಅಜ್ಞಾನ ಅಂಧಕಾರದಲ್ಲಿ ತೊಳಲಾಡುತ್ತಿದ್ದ ಮಾನವರನ್ನು ಧರ್ಮದ ಮೂಲಕ ಜಾಗ್ರತಗೊಳಿಸುತ್ತಾ ಬಂದಿದ್ದಾರೆ.

ಭಾರತದ ಇತಿಹಾಸದಲ್ಲಿ ಮಠಗಳು ಕೂಡ ಒಂದು ಉಜ್ವಲ ಪರಂಪರೆಯನ್ನು ಕಾಯ್ದುಕೊಂಡು ಬಂದಿದೆ. ಎಂಬ ಡಾ. ರಾಜೇಂದ್ರ ಪ್ರಸಾದರವರ ಮಾತು ಬಹಳ ಔಚಿತ್ಯ ಪೂರ್ಣವಾಗಿದೆ. ಸನಾತನವಾದ ವೀರಶೈವ ಧರ್ಮ ಜಗದಾದಿಯಲ್ಲಿ ಜಗದ್ಗುರು ಪಂಚಾಚಾರ್ಯರಿಂದ ಸ್ಥಾಪಿತಗೊಂಡಿತ್ತು. ಈ ಪಂಚ ಪೀಠಗಳ ಮೂಲಕ ಪಂಚಚಾರ್ಯರು ಧರ್ಮವನ್ನು ಪೋಷಿಸಿ ಬೆಳೆಸಿದ್ದಾರೆ. ಯುಗ ಯುಗಗಳಲ್ಲಿ ಅವತಾರ ತಾಳಿದರೆನ್ನುಲಾದ ಶ್ರೀಜಗದ್ಗುರು ಪಂಚಾಚಾರ್ಯರ ಕರ್ತೃತ್ವ ಶಕ್ತಿ

ಅಪಾರವಾದದ್ದು. ಅವರ ಸಂದೇಶ ಸಲಹೆಯಂತೆ ಮುನ್ನಡೆದು ಧರ್ಮಜಾಗೃತಿ ಮಾಡುತ್ತಾ ಬಂದಿರುವ ಅಸಂಖ್ಯಾತ ಮಠಗಳಲ್ಲಿ ಹರಪನಹಳ್ಳಿಯ ತೆಗ್ಗಿನಮಠವೂ ಒಂದಾಗಿದೆ. ಈ ಮಠವು ಮೂಲತ: ಹಿರೇಮಠ. ಮಠವು ತಗ್ಗಿನಲ್ಲಿದ್ದುದರಿಂದ ರೂಢಿಯಲ್ಲಿ ಇತ್ತೀಚಿಗೆ ತೆಗ್ಗಿನ ಮಠವೆಂದಾಗಿದೆ.

## ೩.೨ ಶ್ರೀ ಚಂದ್ರಶೇಖರ ಶಿವಾಚಾರ್ಯರು

ಪ್ರಸ್ತುತ ಚರಿತ್ರ ಪುರುಷರಾದ ಶ್ರೀ ಚಂದ್ರಶೇಖರ ಶಿವಾಚಾರ್ಯರು. ಶ್ರೀವೇದಮೂರ್ತಿಬಸವಲಿಂಗ ಶಾಸ್ತ್ರಿಗಳು ಮತ್ತು ಶ್ರೀಮತಿ ಬಸವಲಿಂಗಮ್ಮ ಎನ್ನವ ಧರ್ಮನಿಷ್ಠರು ಹಾಗೂ ಆದರ್ಶ ಆಚಾರವಂತರ ಪುಣ್ಯೋದರದಲ್ಲಿ ಕ್ರಿ. ಶ. ೧೮೯೨ ರಲ್ಲಿ ನಂದನಾಮ ಸಂವತ್ಸರ ಕಾರ್ತೀಕ ಶುದ್ದನವಮಿ ಶುಭ ಸಮಯದಂದು ಉದಯವಾದರು ದಂಪತಿಗಳ ಆನಂದಕ್ಕೆ ಮೇರೆಯೇಇಲ್ಲ. ೫ ಜನ ಗಂಡು ಮಕ್ಕಳಲ್ಲಿ ಚಂದ್ರಶೇಖರರೇ ಚಿಕ್ಕವರು. ಉಳಿದ ನಾಲ್ವರೆಂದರೆ (೧) ಶ್ರೀ ಚನ್ನವೀರಸ್ವಾಮಿ (೨) ಶ್ರೀ ಗುಡದೀರಯ್ಯ (೩) ವಿರುಪಾಕ್ಷಯ್ಯ (೪) ಶ್ರೀ ರೇವಯ್ಯ ಹಾಗೂ ಇಬ್ಬರು ಹೆಣ್ಣು ಮಕ್ಕಳಲ್ಲಿ ೧)ಕೊಟ್ರಮ್ಮ ಮತ್ತು ಶಂಕ್ರಮ್ಮ ಎಂಬ ಇಬ್ಬರು ಹೆಣ್ಣುಮಕ್ಕಳು ೫ ಜನ ಗಂಡು ಮಕ್ಕಳಲ್ಲಿ ೩ ಜನ ಲೌಕಿಕಕ್ಕೆ ಸಿದ್ದರಾದರೆ ಮೊದಲ ಮತ್ತು ಕೊನೆಯವರನ್ನು ಸಮಾಜಕ್ಕೆ ದಾನಮಾಡಿದ ಕೀರ್ತಿ ಈ ಪುಣ್ಯ ದಂಪತಿಗಳದು.

### ಬೆಳೆದ ಬಿದಿಗೆಯ ಚಂದ್ರ

ಅಳಿಯುತ್ತಿರುವ ಸಂಸ್ಕೃತಿಯನ್ನು ಉಳಿಸಬೇಕೆನ್ನುವ ಅಳಿದುಳಿದ ಸಂಸ್ಕೃತಿಯನ್ನು ಬೆಳೆಸಬೇಕೆನ್ನುವ ಅಪೂರ್ವ ಅವಿಶ್ರಾಂತ ಪರಿಶ್ರಮದ ಶ್ರೀ ಬಸವಲಿಂಗ ಶಾಸ್ತ್ರಿಗಳ ಕೈಯಲ್ಲಿ ಪುಟವಿಟ್ಟ ಚಿನ್ನದಂತೆ ವಿದ್ಯೆಯ ಚೆಲ್ವಿನ ಚೇತನವಾಗಿ ನಲುಮೆಯ ಮಗ ಚಂದ್ರಶೇಖರ ಬೆಳೆಯುವುದನ್ನು ಕಂಡು ಅಪಾರ ಆನಂದ ತಾಯಿ ಹೃದಯಕ್ಕೆ ಶ್ರೀಮದ್ ರಂಭಾಪುರಿ ಪೀಠದ ಆಸ್ಥಾನ ಪಂಡಿತರೆಂದು ಗೌರವಿಸಲ್ಪಟ್ಟಿದ್ದ ಶ್ರೀ ಬಸವಲಿಂಗ ಶಾಸ್ತ್ರಿಗಳ ಮಾರ್ಗದರ್ಶನದಲ್ಲಿ ವಿದ್ಯಾಬ್ಯಾಸ ಸಾಗಿತ್ತು. ಮಗು ಬೆಳೆಯುತ್ತಿದ್ದಂತೆ ಧರ್ಮ- ಸಂಸ್ಕೃತಿಗಳ ಸಂಸ್ಕಾರದ ಜೊತೆಯಲ್ಲೇ ಬೆಳೆಯುತ್ತಿತ್ತು. ಜಾಣನಾಗಿದ್ದ ಬಾಲಕ ಚಂದ್ರಶೇಖರ ಅಲ್ಪ ಅವಧಿಯಲ್ಲಿಯೇ ಹೆಚ್ಚಿನ ಜ್ಞಾನವನ್ನು ಸಂಪಾದಿಸಿಕೊಂಡ ಆಗಾಗ ಗುರುಗಳಲ್ಲಿ ಕೇಳುತ್ತಿದ್ದ ಪ್ರಶ್ನೆ ವಯೋಮಿತಿಗೆ ಮೀರಿದ ಚಿಂತನೆ ಎನ್ನುವುದು ಗುರುಗಳಿಗೂ ತಿಳಿದ ವಿಚಾರ ಅಂತ ಸತ್ವವನ್ನು ಬೆಳಸಿಕೊಂಡು ಬಾಳಬೇಕೆನ್ನುವ ಮಗುವಿನ ಲಕ್ಷಣವನ್ನು ಕಂಡು ಗುರುಗಳು ಉತ್ತಮ ವಿಚಾರಗಳ ಮಳೆ ಮುತ್ತುಗಳನ್ನು ಎರೆಯುತ್ತಿದ್ದರು. ಪ್ರಶ್ನೆಗಳಿಂದ ಕಲಶದ ಸಾಗರದಂತಿದ್ದ ಅವನ ಮನ ತಣಿಸುತ್ತಿದ್ದರು ಹೆಚ್ಚಿನ ವಿದ್ಯಾಬ್ಯಾಸ ಮಾಡಿಸಲು ನನ್ನಿಂದಾಗದು, ಮೀನಿನ ಮರಿಗೆ ಈಜು ಕಲಿಸಿದಂತೆ ನೆಪ ಮಾತ್ರ ಕಲಿಕೆ ನನ್ನದೆಂದು ಗುರುಗಳು ಹೇಳಿದರೆ ಶಾಸ್ತ್ರಿಗಳಿಗೂ ಅದೇ ಚಿಂತೆ ಮುದ್ದು ಮುಖದ ಲಕ್ಷಣದಲ್ಲಿ ಉಕ್ಕಿ ಹರಿದ ಬ್ರಹ್ಮತೇಜ ಸುಶೀಲನಾದ ಆಚಾರ ಸಂಪತ್ತಿನಿಂದ

ಗಂಭೀರಗೊಂಡ ಭಾವಲಕ್ಷಣ ಮಗುವಿನ ಜೀವನದ ದಿಕ್ಕನ್ನೇ ಬದಲಾಯಿಸಿತು. ವಯಸ್ಸು ಬೆಳೆದಂತೆ ಆಧ್ಯಾತ್ಮ ವಿದ್ಯೆಯ ಹಂಬಲ ಹೆಚ್ಚಾಯಿತು. ಇದಕ್ಕೆ ಅನುಕೂಲವಾದಂತೆ ವೈರಾಗ್ಯ ಪಥದ ಸದ್ಬೋಧೆ ಆಗಾಗ ನಡೆಯುತ್ತಲೇ ಇತ್ತು. ಪೂರ್ಣಚಂದ್ರನಂತೆ ಬೆಳೆಯುತ್ತಿದ್ದ ಚಂದ್ರಶೇಖರನನ್ನು ಕಂಡು ತಂದೆ ತಾಯಿ ಸಂತೋಷ ಪಡುತ್ತಾ ಜಾನಪದ ತ್ರಿಪದಿಯಲ್ಲಿ ತಾಯಿ ಮಗುವನ್ನು ಕುರಿತು ಹೀಗೆ ವ್ಯಕ್ತ ಪಡಿಸುತ್ತಾಳೆ.

"ಬಾಳೆಯ ಹಣ್ಣಿಗೆದ್ದ ! ಬಾಳೆಯ ಕಾಯಿಗೆದ್ದ ! ಬಾಳೆಯ

ಏಳು ಗೊನಿಗೆದ್ದ ಬಾಳೆಯ ಏಳು ಗೊನಿಗೆದ್ದ ನನ್ನ !

ಮಗ ಜನಮನಗೆದ್ದ ಘಳಿಗ್ಯಾಗ !"

ಇಂತ ಚಂದ್ರಶೇಖರನಂತ ಪುತ್ರನಿರುವುದೇ ತಮ್ಮ ವಂಶಕ್ಕೆ ಭೂಷಣವೆಂದು ಬಾವಿಸಿದ್ದರು, ವೀರಶೈವ ಮೋಕ್ಷ ಆಚಾರ ಸಂಪತ್ತಿಗೆ ಅನುಗುಣವಾಗಿ ದೀಕ್ಷಾವಿಧಿಗಳು ಶ್ರೀಚನ್ನವೀರ ಮಹಾಸ್ವಾಮಿಗಳಿಂದ ನೇರವೇರಿದವು. ಶಾಸ್ತ್ರೋಕ್ತವಾದ ರೀತಿಯಲ್ಲಿ ಚಂದ್ರಶೇಖರನಿಗೆ 'ಅಂಗಸಂಸ್ಕಾರ' ಲಿಂಗಸಂಸ್ಕಾರ ಮುಂತಾದ ಕ್ರಮಗಳನ್ನು ವಿಧಿವತ್ತಾಗಿ ಜರುಗಿಸಿದ ಬಳಿಕ ಗುರುಗಳು ಲಿಂಗವನ್ನು ದಯಪಾಲಿಸಿ "ಪ್ರಣವ ಪಂಚಾಕ್ಷರಿ" ಮಹಾಮಂತ್ರವನ್ನು ಕರ್ಣದಲ್ಲಿ ನಿಧಾನವಾಗಿ ಬೋಧಿಸಿದರು, "ಈ ಮಹಾಮಂತ್ರವು ಸಪ್ತಕೋಟಿ ಮಂತ್ರಗಳ ರಾಜನೆಂದು ಹೇಳಲಾಗುತ್ತದೆ. ಈ ಶಿವ ಮಂತ್ರದ ಜಪಾನುಷ್ಠಾನ ಬಲದಿಂದ ಬಹುಜನರು ಕಲ್ಯಾಣ ಪಡೆದಿರುವರು ಸಣ್ಣದಾದ ಆಲದ ಬೀಜವು ದೊಡ್ಡ ಮರವನ್ನು ತನ್ನೊಳಗೆ ಹುದುಗಿಸಿಕೊಂಡಿರುವಂತೆ ಆರು ಅಕ್ಕರದ ಮಂತ್ರವು ಮಹಾಮಹಿಮನಾದ ಪರಮಾತ್ಮನನ್ನೇ ತನ್ನೊಳಗೆ ಇಟ್ಟುಕೊಂಡಿರುವುದು. ಇಂತಹ ಮಂತ್ರವನ್ನು ಒಂದು ಸಲವಾದರೂ ಜಪಿಸಿದರೆ ಸಾಕು ಸಕಲ ಇಷ್ಟಾರ್ಥ ಸಿದ್ದಿಗಳು ಕೈಗೂಡುವವು ಎಂದು ಶೃತಿಗಳು ಸಾರಿ ಹೇಳುತ್ತವೆ" ಹೀಗೆ ಗುರುಗಳು ಮಂತ್ರದ ಮಹಿಮೆಯನ್ನು ಚಂದ್ರಶೇಖರರಿಗೆ ಬೋಧಿಸಿದರು. ವೀರಶೈವ ಸಿದ್ಧಾಂತವನ್ನು ತಿಳಿಸಬೇಕೆಂದು ವಿನಂತಿಸಿಕೊಂಡಾಗ ಹರ್ಷಪಟ್ಟ ಶ್ರೀಗಳವರು "ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಷಟ್ಸ್ಥಲವೇ ಆತ್ಮವಾಗಿರುವ ಸಿದ್ಧಾಂತವೇ ವೀರಶೈವ ಸಿದ್ಧಾಂತ" ಎಂದು ತಿಳಿಸಿದರು. ಆದಿಯಲ್ಲಿ ಶ್ರೀಜಗದ್ಗುರು ರೇಣುಕರು ಅಗಸ್ತ್ಯ ಮಹರ್ಷಿಗೆ ಉಪದೇಶ ಮಾಡಿದ ವಿಚಾರವನ್ನು ಚಂದ್ರಶೇಖರರಿಗೆ ಮನಮುಟ್ಟುವಂತೆ ಉಪದೇಶಿಸಿದರು. ಉಗ್ರ ತಪಸ್ವಿಗಳು ಲಿಂಗ ಪೂಜಾನಿಷ್ಠರೂ ಆಗಿದ್ದ ಶ್ರೀಚನ್ನವೀರ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ಆ ಸ್ಥಾನವನ್ನು ಶ್ರೀಗುರು ಬಸವಲಿಂಗ ಸ್ವಾಮಿಗಳು ವಹಿಸಿಕೊಂಡರು ತಮ್ಮ ಪಟ್ಟಾಧಿಕಾರವಾದ ಅಲ್ಪ ಅವದಿಯಲ್ಲಿ ಭಕ್ತರ ಕಲ್ಯಾಣ ಸಮಾಜ ಕಲ್ಯಾಣ ಕಾರ್ಯಕ್ಕಾಗಿ ಬಹುಶ್ರಮಿಸಿದರು ಆ ಸಮಯಕ್ಕಾಗಲೇ ಬಾಲಕ ಚಂದ್ರಶೇಖರ ಪ್ರೌಢಾವಸ್ಥೆಗೆ ಬಂದಿದ್ದರು ಈತನಲ್ಲಿದ್ದ ಭಕ್ತಿ ಶ್ರದ್ಧೆ ಆಚಾರ ವಿಚಾರಗಳನ್ನು ಕಂಡು ಸ್ವಾಮಿಗಳು ತಮ್ಮ ಉತ್ತರಾಧಿಕಾರಿಯಾಗಲು ಸರ್ವವಿಧದಿಂದಲೂ ಯೋಗ್ಯನೆಂದು ನಿರ್ಧರಿಸಿದರು. ಶ್ರೀಗುರು ಬಸವಲಿಂಗ ಸ್ವಾಮಿಗಳ ಆರೋಗ್ಯ ಸ್ಥಿತಿ ಚೆನ್ನಾಗಿರಲಿಲ್ಲ ಕೇವಲ ೫-೬ ವರ್ಷಗಳು ಮಾತ್ರ

ಪಟ್ಟಾಧಿಕಾರಿಗಳಾಗಿದ್ದ ಶ್ರೀಗಳವರು ಲಿಂಗೈಕ್ಯರಾಗುವ ಮುನ್ನ ಚಂದ್ರಶೇಖರನನ್ನು ಹತ್ತಿರ ಕರೆಯಿಸಿಕೊಂಡು ಮುಂದಿನ ಉತ್ತರಾಧಿಕಾರಿ ನೀನಾಗಿ ಈ ಮಠದ ಕೀರ್ತಿ ತರುವಂಥ ಕೆಲಸಕಾರ್ಯಗಳನ್ನು ಕೈಕೊಳ್ಳಬೇಕೆಂದು ಆಶೀರ್ವದಿಸಿ ಲಿಂಗೈಕ್ಯರಾದರು.

ಮಠದ ಭಕ್ತರು ಪುರದ ಪ್ರಮುಖರು ಗುರುವರ್ಗದ ಅಭಿಮಾನಿಗಳು ತೆರವುಗೊಂಡ ಪುತ್ರ ವರ್ಗದ ಪರಂಪರೆಯನ್ನು ತ್ವರಿತವಾಗಿ ಭರಿಸುವಂತೆ ಚಂದ್ರಶೇಖರ ಶಾಸ್ತ್ರಿಗಳ ಅರ್ಥವನ್ನು ಬಲ್ಲವನಾಗಿರಬೇಕು ಅದನ್ನೇ ಜನರಿಗೆ ಉಪದೇಶ ಮಾಡಬೇಕು ಸ್ವಯಂ ಆಚರಣೆ ಬಾರದೆ ಆಚಾರ್ಯವೆನಿಸಲಾರನು ಗುರು ಕಾರುಣ್ಯಸ್ಥಲ ಪವಿತ್ರ ಸದ್ವಂಶದಲ್ಲಿ ಜನಿಸಿ ಸದಾಚಾರ ಸಂಪನ್ನರ ಕೆಟ್ಟಮಾರ್ಗವನ್ನು ಬಿಟ್ಟವನು ಶಿವಧ್ಯಾನ ನಿರತನು, ಶಾಂತನು, ಶಿವತತ್ವ ವಿವೇಕವುಳ್ಳವನು ಆಗಿರಬೇಕು. ಆತ್ಮ ತತ್ವ ಜ್ಞಾನಿಯೂ ವಿಷಯ (ಸಂಸಾರ) ಗಳಿಂದ ವಿಮುಕ್ತನಾದವನು ಶಿವತತ್ವ ಸಿದ್ಧಾಂತ ಶಿವ ಸ್ವರೂಪವನ್ನು ಬಲ್ಲವನು ಆಗಿರಬೇಕು ಅಂಗಸ್ಥಲ ಲಿಂಗಸ್ಥಲ ಆತ್ಮಸ್ಥಲಗಳಿಂದ ನೂರೊಂದು ಸ್ಥಳಗಳ ಬೋದೆ ಸ್ವರೂಪವನ್ನು ಗ್ರಹಿಸಿದವನು ಸದಾ ಮಂಗಳ ವಚನಗಳನ್ನು ಆಡುವವನೂ ಇವೇ ಮೊದಲಾದ ದೈವೀ ಸಂಪತ್ತನ್ನು ಗಳಿಸಿಕೊಂಡವನಿಗೆ ಆಚಾರ್ಯನೆಂತಲೂ ಷಟಸ್ಥಲ ಬ್ರಹ್ಮನೆಂತಲೂ ಘನಲಿಂಗ ಚಕ್ರವರ್ತಿ ಎಂತಲೂ ಹೀಗೆ ಅನೇಕ ಪರ್ಯಾಯ ನಾಮಗಳಿಂದ ಕರೆಯುತ್ತಾರೆ. ಈ ಎಲ್ಲಾ ಗುಣಗಳು ಮೈದೋರಿ ನಿಂತು ನಾಡನ್ನು ಉದ್ಧರಿಸುವ ಸಲುವಾಗಿ ಶ್ರೀಚಂದ್ರಶೇಖರರು ತೆಗ್ಗಿನ ಮಠದ ಪಟ್ಟಾಧಿಕಾರ ವಹಿಸಿಕೊಳ್ಳಲು ಸರ್ವರ ಕೋರಿಕೆಯ ಮೇರೆಗೆ ಸಿದ್ಧರಾದರು.

## ಪಟ್ಟಾಧಿಕಾರ

೧೯೧೫ ನೇ ಇಸ್ವಿ ಮಂಗಳದ ವೈಶಾಖ ಶುದ್ಧ ಪಂಚಮಿ ಇನ್ನೂ ಮುಂದಿರುವಾಗಲೇ ಸಡಗರ ವೈಭವಗಳ ರಂಗು ದಿನೇ ದಿನೇ ಅಧಿಕವಾಯಿತು.ವೈಶಾಖ ಶುದ್ಧ ತದಿಗಿ ಆದಿನ ಉಜ್ಜಯಿನಿ ಜಗದ್ಗುರು ಶ್ರೀಮರುಳಸಿದ್ಧರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಹಾಗೂ ಜಗದ್ಗುರುಗಳವರು ಶ್ರೀಸಿದ್ಧಲಿಂಗ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಆದೇಶ ಆಶೀರ್ವಾದ ಮೈಗೂಡಿ ಶಾಖಾ ಜಗದ್ಗುರುಗಳಾದ ರಂಭಾಪುರಿ ಪೀಠದ ಶ್ರೀಜಗದ್ಗುರುಗಳವರ ಆಶೀರ್ವಾದ ಫಲಗೊಂಡುಪುರದಸೋಗಿ ಪುರವರ್ಗ ಕಟ್ಟೀಮನಿ ಮಠದ ಶ್ರೀಸಿದ್ಧವೀರ ಶಿವಾಚಾರ್ಯ ಮಹಾಸ್ವಾಮಿಗಳ ಹರಪನಹಳ್ಳಿ ಗುರುಪಾದ್ದೇವರ ಮಠದ ಶ್ರೀಗುರುಪಾದ ಶಿವಾಚಾರ್ಯ ಮಹಾಸ್ವಾಮಿಗಳ ಬೆಣ್ಣಿಹಳ್ಳಿ,ರಾಮಘಟ್ಟ,ಮೊಳಕಾಲ್ಮೂರು, ದುಗ್ಗಾವತಿ ಇನ್ನೂ ಅನೇಕ ಗ್ರಾಮಗಳಿಂದ ಆಗಮಿಸಿದ ಹರ-ಗುರು-ಚರಮೂರ್ತಿಗಳ ಸಮ್ಮುಖದಲ್ಲಿ ಗುರು ಪಟ್ಟಾಧಿಕಾರ ಮಹೋತ್ಸವವು ವೀರಶೈವ ಶಿಷ್ಟಾಚಾರಗಳಿಗೆ ಅನುಸಾರವಾಗಿ ನಡೆದು ನಾಡಿನ ಭಕ್ತರನ್ನು ತಣಿಸಿತು. ಈ ಪಟ್ಟಾಧಿಕಾರ ಮಹೋತ್ಸವ ಕಾರ್ಯಕ್ಕೆ ತನು-ಮನ-ಧನದಿಂದ ಸೇವೆ ಸಲ್ಲಿಸಿ ಶ್ರಮ ಸಾರ್ಥಕವಾಯಿತೆಂದು ಜನಗಳು ಸಂತಸಪಟ್ಟರು. ಪಟ್ಟಾಧಿಕಾರ ಮುಗಿದು ಅಧಿಕಾರಕ್ಕೆ ಕಳುಹಿಸಿದ ಆನೆಯು ಬರಲಿಲ್ಲವೆಂದು ಉಜ್ಜಯಿನಿ ಪೀಠದ ಜಗದ್ಗುರುಗಳ ನಿರೂಪ ಬಂದಾಗ ಗುರುಗಳ ದರ್ಶನಕ್ಕೆ ತಾವೇ ಹೋಗಿ

ಸಾಷ್ಟಾಂಗಾದಿಗಳನ್ನು ಅರ್ಪಿಸಿ ಪಟ್ಟಾಧಿಕಾರದ ಅಂಗವಾಗಿ ನಡೆದ ಕಾರ್ಯಗಳನ್ನು ವಿವರಿಸಿದರು. ಇದೇ ಸಂದರ್ಭದಲ್ಲಿ ಉಚಿತ ಧರ್ಮಾರ್ಥ ವಿವಾಹಗಳು ಮಹೇಶ್ವರ ಶಿವ ಧೀಕ್ಷೆ ವೀರಶೈವ ಭಕ್ತರಿಗೆ ಧೀಕ್ಷೆ, ಪಲ್ಲಕ್ಕಿ ಉತ್ಸವ ನಡೆದುದನ್ನು ವಿವರವಾಗಿ ಗುರುಪಾದದ ಮುಂದೆ ಬಿತ್ತರಿಸಿ ಆಶೀರ್ವಾದ ಪಡೆದರು.

## ೩.೩ ಶ್ರೀಗಳು ಧರಿಸುವ ವೇಷಭೂಷಣ

ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ವ್ಯಕ್ತಿತ್ವವನ್ನು ವರ್ಣಿಸುವದು ಸುಲಭ ಸಾಧ್ಯವಾದ ಕೆಲಸವಲ್ಲ. ಕೊರಳಲ್ಲಿ ರುದ್ರಾಕ್ಷಿ ಹಣೆಗೆ ಹಚ್ಚಿದ ತ್ರಿಪುಂಡ: ನಡುಗಣ್ಣು ಶಾಂತಗೊಳ್ಳಲಿ ಎಂಬಂತೆ ಹಚ್ಚಿದ ಗಂಧ ಶರೀರ ಕಾಂತಿಗೆ ಮೆರಗು ಕೊಡುವ ತಿಳಿಗಾವಿಯ ಪೇಟಾ, ಕಾವಿಅಂಗಿ ಕಾವಿಪಂಜೆ, ಹೆಗಲ ಮೇಲೊಂದು ಶಲ್ಯ ಇದಿಷ್ಟು ಅವರ ಹೊರ ಆಕಾರದ ಚಿತ್ರ ನೋಡಲು ಸ್ಪುರದ್ರೂಪಿಗಳು, ಆಡಂಭರವಿಲ್ಲದ ಸರಳ ಜೀವನ ತೆಳ್ಳನೆಯ ಎತ್ತರವಾದ ಕಾಯ. ಚಿಕ್ಕವರಿದ್ದಾಗ ಗರಡಿ ಮನೆಯಲ್ಲಿ ಕುಸ್ತಿ ತರಬೇತಿ ಪಡೆದ ಕಾರಣ ಸಧೃಡಕಾಯ, ಕುಸ್ತಿ ಮತ್ತು ಸಂಗೀತ ಪ್ರೀಯರು, ಪಶು ಪಕ್ಷಿಗಳೆಂದರೆ ಅಪಾರ ಪ್ರೀತಿ ಮಠದಲ್ಲಿದ್ದ ಕುದುರೆ, ಗೋವುಗಳು, ಎತ್ತುಗಳು, ನಾಯಿ ಇವೆಲ್ಲ ಅವರ ಸಾಕು ಪ್ರಾಣಿಗಳು, ಕುದುರೆ ಸವಾರಿಯಲ್ಲಿ ಮಹಾ ಪರಿಣಿತರಾಗಿದ್ದರು. ಅಚಲವಾದ ದೈವೀ ಭಕ್ತರಾಗಿದ್ದ ಪೂಜ್ಯರ ದರ್ಶನವಾದರೆ ಸಾಕು, ಎಂಥಹ ನಾಸ್ತಿಕನೂ ಆಸ್ತಿಕನಾಗುವಂತ ಶಿವಸ್ವರೂಪಿಗಳಾಗಿದ್ದರು. ಆದ ಕಾರಣ ಈ ಪ್ರದೇಶ ಜನಪದ ಸ್ತ್ರೀಯರು ಭಕ್ತಿಯಿಂದ ಹೀಗೆ ತ್ರಿಪದಿಯಲ್ಲಿ ವ್ಯಕ್ತಪಡಿಸುತ್ತಾರೆ.

"ತಾಯಿ ನಮ್ಮವ್ವನ ಯಾವಾಗ ನೆನೆಬೇಕು
ಮೂಡಲಗೆಂಪು ಹರಿವಾಗ , ಮಲ್ಲಿಗ್ಹೂವ
ಪುಟ್ಯಾಗ ಮಠಕ ತರುವಾಗ"

ನಾವು ತಾಯಿಯನ್ನು ಹೇಗೆ ಸದಾ ನೆನೆಯುತ್ತಾ ಜೀವನ ಸಾಗಿಸುತ್ತೇವೆ ಅಷ್ಟೇ ಅಲ್ಲದೇ ಬೆಳಗಿನ ಜಾವದ ಸಂದರ್ಭದಲ್ಲಿ ಮಲ್ಲಿಗೆ ಕುಸುಮವು ಕೂಡಾ ತನ್ನ ಎಲ್ಲಾ ದಳಗಳನ್ನು ಬಿಚ್ಚಿ ಸುಮಧುರವಾದಾಗ ಘಮ ಘಮ ಕಂಪನ್ನು ನೀಡುತ್ತದೆಯೋ ಹಾಗೆಯೇ ಮಲ್ಲಿಗೆ ಹೂವನ್ನು ಮಠಕ್ಕೆ ತಂದೆ ಸ್ವಾಮಿಯ ಮಡಿಲಿಗೆ ಎರಿಸಿದರೆ ಈ ಮಹಾತ್ಮನ ದರ್ಶನ ಸ್ಪರ್ಶನ ಮಾತ್ರದಿಂದಲೇ ಪಾಪ ನಾಶವಾಗಿ ಪುಣ್ಯ ಲಭಿಸುತ್ತದೆ ಎಂದು ಹೇಳಿದ್ದಾರೆ.

"ಕಚ್ಚಿ ಕೈ ಬಾಯಿ ತನ್ನಿಚ್ಚೆಯಲಿ ಇದ್ದಿದ್ದರೆ
ಅಚ್ಯೂತನು ಅಪ್ಪ ಅಜನಪ್ಪ
ಲೋಕದಲ್ಲಿ ನಿಶ್ಚಿಂತನಪ್ಪ ಸರ್ವಜ್ಞ"

ಈ ಮಾತುಗಳು ಶ್ರೀಗಳವರಿಗೆ ಪೂರ್ಣ ಅನ್ವಯಿಸುತ್ತದೆ ಇಂದ್ರಿಪ ಕಾದಾಂತ ಯೋಗಿ ಎನ್ನುವ ಮಾತಿನಂತೆ ಇಂದ್ರಿಯ ನಿಗ್ರಹ ಶಕ್ತಿ ಪಡೆದಿದ್ದ ಶ್ರೀಗಳವರು ಶ್ರೇಷ್ಠ ಬ್ರಹ್ಮಾಚಾರಿಗಳಾಗಿದ್ದರು. ತ್ರಿಕಾಲ

ಜಪ ಮಾಡುತ್ತಿದ್ದರು. ಪ್ರಯಾಣ ಕಾಲದಲ್ಲೂ ಇದು ತಪ್ಪುತ್ತಿರಲಿಲ್ಲ. ಜಪತಪದಿಂದಾಗಿ ಅಪಾರ ಸಿದ್ಧಿಯನ್ನು ಪಡೆದಿದ್ದರು, ಹಾಗಾಗಿ ಇವರಿಗೆ ನಾಡಿನಾದ್ಯಾಂತ ಭಕ್ತರಿದ್ದಾರೆ.

## ೩.೪ ನಿತ್ಯ ಕ್ರಿಯೆ, ವಿಧಿ ವಿಧಾನಗಳು

ಪೂಜ್ಯರು ಚಟುವಟಿಕೆಯಿಂದ ಇರುತ್ತಿದ್ದರು. ಇದಕ್ಕೆ ಕಾರಣ ಅವರು ಚಾಚೂ ತಪ್ಪದೇ ನಡೆಸಿಕೊಂಡು ಬಂದ ದೈನಂದಿನ ಕಾರ್ಯಗಳೇ ಆಗಿದ್ದವು. ಪ್ರತಿದಿನ ಬೆಳಿಗ್ಗೆ ೫ ಗಂಟೆಗೆ ಶಿವನಾಮ ಮತ್ತು ಗುರುನಾಮ ಸ್ಮರಣೆ ಮಾಡುತ್ತಾ ಏಳುತ್ತಿದ್ದರು ಮುಖಮಾರ್ಜನೆ ಮಾಡಿ ತಮ್ಮ ಪಕ್ಕದಲ್ಲೇ ಸದಾ ಇರುತ್ತಿದ್ದ ಭಸ್ಮವನ್ನು ಧರಿಸುತ್ತಿದ್ದರು. ಬ್ರಾಹ್ಮೀ ಮಹೋರ್ತದಲ್ಲಿ ಎದ್ದು ದೇವರ ಸ್ತುತಿ ಗುರುಸ್ತುತಿ ಮಾಡಿ ಆ ಒಳ್ಳೆಯ ಸಮಯವು ಬ್ರಹ್ಮ ಚಿಂತನೆಗೆ ಯೋಗ್ಯವಾಗಿರುತ್ತದೆ. ಮನಸ್ಸು ಬಹಳ ಪ್ರಸನ್ನವಾಗಿರುವುದರಿಂದ ಶಾಸ್ತ್ರಭ್ಯಾಸವನ್ನು ಮಾಡಿದರೆ ಸಫಲವಾಗುವುದು ಇಲ್ಲವೆ ಈಶ್ವರ ಪೂಜಾಜಪತಪದಿ ಧಾರ್ಮಿಕ ಕ್ರಿಯೆಗಳನ್ನು ಆಚರಿಸುವುದು ಆ ಸಮಯಕ್ಕೆ ವಿಹಿತವಾಗಿರುತ್ತದೆ. ಎಂದು ಭಾವಿಸಿದ್ದರು. ನಂತರ ಅರ್ಧ ತಾಸು ಆನಂದವಾಗಿ ಉದಯರಾಗ ಹಾಡುತ್ತಿದ್ದರು. ಸುಶ್ರಾವ್ಯವಾದ ಕಂಠ ಮಾಧುರ್ಯ ಶಿವ ಸ್ತೋತ್ರ ಮಂಗಲ ಪದ್ಯ ಶ್ರೀ ಜಗದ್ಗುರು ರೇಣುಕಾ ಸ್ತುತಿಗಳನ್ನು ಇಂಪಾಗಿ ಭಾವಪರವಶರಾಗಿ ಹಾಡುತ್ತಿದ್ದರು. ಬೆಳಗು ಮುಂಜಾನೆಯ ಪ್ರಶಾಂತ ವಾತಾವರಣದಲ್ಲಿ ಶ್ರೀಗಳವರ ಗಾಯನ ಅಲೆ ಅಲೆಯಾಗಿ ತಂಗಾಳಿಯಲ್ಲಿ ತೇಲಿದೂರದವರೆಗೂ ಕೇಳಿ ಬರುತ್ತಿತ್ತು. (ಇದನ್ನೆಲ್ಲಾ ಕೇಳಿ) ಬೆಳಿಗ್ಗೆ ಪ್ರಯಾಣ ಮಾಡುವವರು ಇವರ ಗಾಯನ ಕೇಳಿಕೊಂಡರೆ ಸಾಕು ತಾವು ಹೋಗುವ ಕೆಲಸ ಯಶಸ್ವಿಯಾದಂತೆ ಎಂದು ಭಾವಿಸಿದ್ದರು ಅದೇ ರೀತಿ ಸಹ ಅವರ ಕಾರ್ಯಗಳು ಕೈ ಗೂಡುತ್ತಿದ್ದವು ಆದಕಾರಣ ಅಲ್ಲಿಯ ಜನತೆ ಮಠ ಮತ್ತು ಶಿವಾಚಾರ್ಯರನ್ನು ಕುರಿತು ಜಾನಪದ ತ್ರಿಪದಿಯಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

"ನೀರಿಗೆ ಹೋಗುತಾ ಸುರುವ್ಯಾನ ಲೋಭಾನ
ಗಾಳಿ ಬೀಸಿದರೆ ಘಮ ಘಮ
ಸ್ವಾಮಿ ತೋಳು ಬೀಸಿದರೆ ಥಳ ಥಳ"

ಹೀಗೆ ಯಾವ ಕೆಲಸ ಕಾರ್ಯಕ್ಕೆ ಹೋಗುವ ಸಂದರ್ಭದಲ್ಲಿ ಅವರ ದರ್ಶನ ಮತ್ತು ಧ್ವನಿ ಕೇಳಿದರೆ ಎಲ್ಲಾ ಕೆಲಸ ಕಾರ್ಯಗಳು ಆದಂತೆ ಎಂದು ತಿಳಿಯುತ್ತಿದ್ದರು. ಹಾಗೆ ಒಮ್ಮೆ ಗದುಗಿನಿಂದ ಪುಟ್ಟರಾಜ ಗವಾಯಿಗಳು ಹರಪನಹಳ್ಳಿಗೆ ಬಂದಿದ್ದರು. ಚಂದ್ರಶೇಖರ ಸ್ವಾಮಿಗಳ ಹಾಡು ಕೇಳಿ ಆನಂದ ಪಟ್ಟು , ಸಂಗೀತ ವಿದ್ಯಾಭ್ಯಾಸವಿಲ್ಲದೇ ಈ ರೀತಿ ಸುಶ್ರಾವ್ಯವಾಗಿ ಹಾಡುವುದೆಂದರೆ ಇದು ವರ ಪುಣ್ಯವೆಂದೆ ಉದ್ಗಾರ ತೆಗೆದರು ಪ್ರಾರ್ಥನೆ ಮುಗಿಸಿ ೫:೩೦ ಗಂಟೆಗೆ ತಿಳಿಗಾವಿಯ ಪೇಟಾ ಧರಿಸಿಕೊಂಡು ಕೈಯಲ್ಲಿ ದೊಡ್ಡ ತಂಬಿಗೆ ಹಿಡಿದುಕೊಂಡು ಮಠದ ಹೊಲಗಳ ಕಡೆಗೆ ಸಂಚಾರಕ್ಕೆ ಹೋಗುತ್ತಿದ್ದರು.ಮಠದಿಂದ ಹೊರಗೆ ಹೊರಟರೆ ಸಾಕು ನೆಲ ನೋಡುತ್ತಾ ಹೋಗುವುದು ರೂಡಿ, ಕಣ್ಣೆತ್ತಿ ಮಾರ್ಗದಲ್ಲಿ ಯಾರನ್ನೂ ನೋಡುತ್ತಿರಲಿಲ್ಲ ಯಾರಾದರೂ ಮುಂದೆ ಬಂದು ನಮಸ್ಕಾರ

ಮಾಡಿದಾಗಲೂ ಮುಖ ಎತ್ತಿ ನೋಡಿ, ಆಶಿರ್ವದಿಸಿ ಮುಂದೆ ಹೋಗುತ್ತಿದ್ದರು. ಪ್ರತಿ ದಿನ ಎರಡು ಕಿ.ಮೀ. ನಡೆಯುವದು ಅವರ ಅಭ್ಯಾಸವಾಗಿತ್ತು ಬರುವಾಗ ಹೂವು ಪತ್ರಿ ಸಂಗ್ರಹಿಸಿಕೊಂಡು ಬರುತ್ತಿದ್ದರು. ಬಂದ ನಂತರ ಸ್ನಾನ ಮಾಡಿದರೆ ಅಲ್ಲಿಗೆ ೧೦:೦೦ ಗಂಟೆ ಯಾಗುತ್ತಿತ್ತು.ಆನಂದವಾಗಿ ತಂದ ಬಿಲ್ವ ಪತ್ರಿ ಕುಸುಮಗಳಿಂದ ಲಿಂಗ ಪೂಜೆ ಮಾಡುತ್ತಿದ್ದರು.

"ಶಿವಪೂಜೆ ಮಾಡಿದಡೆ ಶಿವನ ಕೊಂಡಾಡಿದಡೆ
ಶಿವನಲ್ಲಿ ನೆನವು ನೆಲಸಿರ್ದಡಾತಂಗೆ
ಶಿವಲೋಕದಿರವು ಸರ್ವಜ್ಞ"

ಸರ್ವಜ್ಞನ ಈ ಮಾತು ಅರ್ಥಪೂರ್ಣವಾಗಿದೆ ಶಿವಪೂಜೆ, ಶಿವಧ್ಯಾನ, ಶಿವಸ್ಮರಣೆ, ಶಿವಲೋಕವಾಸಕ್ಕೆ ಸುಲಭ ಉಪಾಯ ಇದೇ ಮಾತನ್ನು ಶ್ರೀಘನಮಠದಾರ್ಯರು ಬಹು ಸ್ವಾರಸ್ಯವಾಗಿ ಭಕ್ತರಿಗೆ ಮಾರ್ಗದರ್ಶನ ಮಾಡುತ್ತಿದ್ದರು.

ವೀರಶೈವ ಧರ್ಮದ ಗುರುಗಳಾದವರು ವಿಷಯವ್ಯಾಮೋಹದ ನಿದ್ರೆಯಲ್ಲಿರುವ ಮನುಜರನ್ನು ಎಚ್ಚರಿಸಿ ಭಕ್ತಿ ಜ್ಞಾನದ ಬೆಳಕಿನಲ್ಲಿ ನಡೆಯಲು ಕಳಿಸಿದ್ದಾರೆ. ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಸಹ ಶಿವ ಪೂಜೆಗೆ ಹೆಚ್ಚಿನ ಸಮಯ ವಿನಿಯೋಗಿಸುತ್ತಿದ್ದರು. ಪೂಜೆಯ ಮೂಲಕ ಮನಸ್ಸನ್ನು ಏಕಾಗ್ರಗೊಳಿಸುತ್ತಿದ್ದರು. ಗಾಳಿಗಿಂತಲೂ ವೇಗವಾದದ್ದು ಚಂಚಲವಾದದ್ದು ಮನಸ್ಸು ಇಂಥಹ ಮನಸ್ಸು ನಿಲ್ಲಿಸಲು ಪ್ರಯತ್ನಿಸುತ್ತಿದ್ದರು. ಮನಸ್ಸು ಒಂದು ನಿಮಿಷ ನಿಂತರೆ ಅದೇ ಯೋಗ ಎನ್ನುವರು. ಇಂತಹ ಯೋಗ ಬಲವನ್ನು ಪ್ರತಿನಿತ್ಯ ಸಾಧಿಸುತ್ತಿದ್ದರು. ಮನಃಶಾಸ್ತ್ರದಲ್ಲಿ ಹೇಳಿರುವಂತೆ ೩೦ ನಿಮಿಷ ಮನಸ್ಸನ್ನು ತಡೆದು ನಿಲ್ಲಿಸಲು ಬಂದರೆ ದೂರದೃಷ್ಟಿ, ಅಷ್ಟಮಹಾಸಿದ್ಧಿಗಳು ಲಭಿಸುತ್ತವೆ. ಪೂಜೆಗೆ ಕುಳಿತಾಗ ಮನ ಲಿಂಗದೊಳು ಲೀನವಾಗುತ್ತಿತ್ತು. ಶ್ರೀಗಳವರು ವೀರಶೈವ ಧರ್ಮದ ಆಚರಣೆಯನ್ನು ತಂದಿದ್ದರು ಲಿಂಗವನ್ನು ನಿಚ್ಚಳವಾಗಿ ನೋಡುತ್ತಿದ್ದರು. "ಲಿಂಗಪತಿ-ಅಂಗಸತಿ" ಆತನನ್ನು ರಮಿಸುವುದೇ ಲಿಂಗಾಂಗ ಸಾಮರಸ್ಯ ಎಂದು ಕರೆಯುತ್ತಾರೆ.

ಇಷ್ಟಲಿಂಗದಲ್ಲಿ ಅತ್ಯಂತ ನಿಷ್ಠೆಯುಳ್ಳವರಾಗಿದ್ದ ಶ್ರೀಗಳವರಿಗೆ ಪೂಜೆಯಲ್ಲಿ ಬೇಸರಿಕೆ ಎಂಬುದೇ ಇಲ್ಲ. ಚಂದ್ರಶೇಖರ ಸ್ವಾಮಿಗಳು ಸಹ ಲಿಂಗಪೂಜೆಯಲ್ಲಿ ತಮ್ಮನ್ನು ತಮ್ಮ ತನುವನ್ನು ಮರೆಯುತ್ತಿದ್ದರು. ಇದುವೇ ಸಮರಸ ಪೂಜೆ, ಪೂಜೆಯ ನಂತರ ಪ್ರಸಾದ. ಪ್ರಸಾದ ಯಾವುದೆ ಆದರೂ ತೃಪ್ತಿ ಪಡುತ್ತಿದ್ದರು. ಮುದ್ದಿ, ಮೆಂತೇದ ಹಿಂಡಿ, ಸೊಪ್ಪಿನ ಪಲ್ಯದ ಊಟ ಅಂದರೆ ವಿಶೇಷ ಮೆಚ್ಚಿಗೆ ಪ್ರಸಾದ ನಂತರ ಸ್ವಲ್ಪ ವಿಶ್ರಾಂತಿ ನಂತರ ತೆಗ್ಗಿನ ಮಠದಿಂದ ದಾಸೋಹ ಮಠಕ್ಕೆ ಬಂದು, ಬಂದ ಭಕ್ತರಿಗೆ ದರ್ಶನ ಕೊಟ್ಟು ಅವರಿಗೆ ಪ್ರಸಾದ ವ್ಯವಸ್ಥೆಯ ಏರ್ಪಾಟು ನೋಡಿಕೊಂಡು ಬರುತ್ತಿದ್ದರು. ಸಾಯಂಕಾಲ ಪುನಃ ೩ಕಿ.ಮೀ.ದೂರ ವಾಯು ವಿಹಾರಕ್ಕೆ ಹೋಗುತ್ತಿದ್ದರು ಬಂದ ನಂತರ ತೆಗ್ಗಿನ ಮಠಕ್ಕೆ ಬಂದು ಮುಖ ಮಾರ್ಜನೆಮಾಡಿ, ಜಪಮಾಡಿ, ಸಾಕು ಪ್ರಾಣಿಗಳ ಮೇಲ್ವಿಚಾರಣೆ ನೋಡಿಕೊಂಡು ಪವಾಡಿಸುತ್ತಿದ್ದರು.-[೩]

## ೩.೫. ಬಸಾಪುರಕ್ಕೆ ಬಂದ ಬರಗಾಲ

೧೯೩೧ ನೇ ಇಸ್ವಿಯಲ್ಲಿ ಹೂವಿನ ಹಡಗಲಿ ತಾಲೂಕ ನಾಗತಿ ಬಸಾಪುರಕ್ಕೆ ಶ್ರೀ ಚಂದ್ರಶೇಖರ ಶಿವಯೋಗಿಗಳು ದಯಮಾಡಿಸಿದರು ಆ ಸಮಯದಲ್ಲಿ ಬರಗಾಲ ರೂಪದ ಪ್ರಕೃತಿಯ ಮುನಿಸು ಜನಗಳಲ್ಲಿ ಹಾಹಾಕಾರ ಎಬ್ಬಿಸಿತ್ತು. ಅನ್ನಕ್ಕಾಗಿ ಪರದಾಡುವ ಜನಗಳ ಗೋಳು ಒಂದು ಕಡೆಯಾದರೆ, ಮೆವಿಲ್ಲದೇ ಸಾಯುವ ಜಾನುವಾರುಗಳ ಸಾಲು ಮತ್ತೊಂದು ಕಡೆ ಮಳೆಯನ್ನು ಆಶ್ರಯಿಸಿ ಬದುಕುವ ರೈತನ ಜೀವ ತಲ್ಲಣಿಸಿತ್ತು. ಇಂತಹ ಸಂದರ್ಭದಲ್ಲಿ ಭಕ್ತಿ ಸಾಮೂಹಿಕ ನೆಮ್ಮದಿ ಮುಂತಾದುವು ಗ್ರಾಮೀಣ ಜನರ ಆಶಯಗಳಾಗಿ ಜನಪದಪ್ರಯದಲ್ಲಿ ಉಳಿದುಕೊಂಡು ಬಂದ ಇತಿಹಾಸ ಪೂರ್ವ ಕಾಲದಿಂದ ಹೀಗೆ ವ್ಯಕ್ತಪಡಿಸುತ್ತಾರೆ.

"ಮಳೆರಾಯ ಹುಯ್ಯಲಿ
ಕೆರೆರಾಯ ತುಂಬಲಿ
ಹನ್ನೆರಡು ಕೋಡಿ ಹರಿಯಲಿ
ನಮ್ಮೂರ ತೇರು ಎಳೆಯಲಿ"

ಮಳೆಯಾಗದೇ ಬರಗಾಲ ಬಂದಂತ ಸಮಯದಲ್ಲಿ ಜಾನಪದ ಸ್ತ್ರೀ ಒಂದು ಊರಿನಿಂದ ಇನ್ನೊಂದು ಊರಿಗೆ ಕೊಟ್ಟಂತಹ ಗರತಿ ತನ್ನ ತವರಿಗೆ ಬಹಳಷ್ಟು ಮಳೆಯಾಗಲಿ, ಸಣ್ಣಕ್ಕಿ ಬೆಳೆದರೆ ನನಗೂ ಸ್ವಲ್ಪ ಕೊಡುತ್ತಾರೆ ಕೊನೆಗೆ ಅವರು ಅಕ್ಕಿ ಕೊಡದಿದ್ದರೂ ತವರಿನವರು ಊರಿನಲ್ಲಿ ಸಡಗರದಿಂದ ನಡೆಯುವ ತೇರು, ಜಾತ್ರೆ ಹಬ್ಬಕ್ಕಾದರೂ ತಂದೆ, ತಾಯಿ. ಅಥವಾ ಅಣ್ಣನಾಗಲಿ ಕರೆಯುತ್ತಾರೆ. ಆಗಲಾದರು ಅವರನ್ನು ನೋಡಿ ಸಂತೋಷ ಪಡಬಹುದು ಆದಕಾರಣ ಚನ್ನಾಗಿ ನನ್ನ ತವರೀಗೆ ಮಳೆಯಾಗಲಿ ಎಂದು ತನ್ನ ಮನದ ಅಂತರಾಳವನ್ನು ವ್ಯಕ್ತಪಡಿಸುತ್ತಾಳೆ.

"ಶಿವ ಶಿವ ಎಂದರೆ ಸಿಡಿಲೆಲ್ಲಾ ಬಯಲಾಗಿ
ಕಲ್ಲು ಬಂದೆರಗಿ ಕಡೆಗಾಗಿ! ಎಲೆ ಮನವೆ!
ಶಿವನೆಂಬ ಶಬುದ ಬಿಡಬೇಡ"

ಎಂಥ ಕಷ್ಟ ಬಂದರೂ ಭಯಪಡಬೇಡ, ಅಂಥಹ ಸಂದರ್ಭದಲ್ಲಿ ಶಿವನನ್ನು ನೆನೆ ಆಗ ಸಿಡಿಲಿನಂತೆ ಕಷ್ಟಗಳು ಬಂದರೂ ನಿನ್ನಿಂದ ದೂರವಾಗುತ್ತದೆ. ನಿನ್ನ ಮೇಲೆ ಕಲ್ಲು ಗುಡ್ಡವೇ ಬಂದು ಮೇಲೆ ಬೀಳುತ್ತದೆ ಎಂದರೂ ಕೂಡಾ ಆ ಸಮಯದಲ್ಲಿ ಶಿವನನ್ನು ನೆನೆ ಆಗ ಅದು ನಿನ್ನಿಂದ ದೂರವಾಗುತ್ತದೆ. ಎಂದಿದ್ದಾರೆ ಗುರುದರ್ಶನಕ್ಕೆ ದಾವಿಸಿ ಕಷ್ಟವನ್ನು ತೋಡಿಕೊಂಡಾಗ "ಏಳು ದಿನದ ಮೌನದ ನಂತರ ಮಳೆರಾಯನ ಮುನಿಸು ತೀರುವ ಸಂಭವವಿದೆ. ನಮ್ಮ ಮೌನ ಅನುಷ್ಠಾನದ ಜೊತೆಯಲ್ಲೆ ನೀವು ಗುರು ಭಜನೆಯನ್ನು ಮಾಡಿರಿ ಜಂಗಮರಿಂದ ಕ್ರಿಯಾ ದಿನಗಳನ್ನು ಪಡೆಯುತ್ತಾ ಸದ್ಭಕ್ತರು ಸಪ್ತ ಭಜನೆಯನ್ನು ಆಚರಿಸಿರಿ. ಆಗ ಮಳೆ ಮನೆಯ ಭಾಗಿಲನ್ನು ಹುಡುಕಿಕೊಂಡು ಬರುತ್ತದೆ. ಎಂದು ಅಪ್ಪಣೆ ಮಾಡಿದರು. ದಿನನಿತ್ಯವೂ ಅನ್ನ ಸಂತರ್ಪಣೆ, ಅಲ್ಲದೇ ಗುರುಗಳು ಅಪ್ಪಣೆ ಕೊಡಿಸಿದ

ಎಲ್ಲಾ ಕ್ರಿಯಾಚಾರಗಳ ಆಚರಣೆ ಇತ್ತ ಗುರುಗಳ ಅನುಷ್ಠಾನ ಏಳು ದಿವಸ ನಡೆಯಿತು. ಇವುಗಳಿಂದಾಗಿ ಶಿವನ ಕೃಪೆಯುಂಟಾಗಿ ಮಳೆ ಇಡೀ ರಾತ್ರಿ ಸಮೃದ್ಧವಾಗಿ ಸುರಿಯಿತು. ಹರ್ಷಪಟ್ಟ ಜನತೆ ಮರುದಿನ ಗುರುಗಳ ಪಲ್ಲಕ್ಕಿ ಉತ್ಸವವನ್ನು ಶ್ರದ್ಧೆ ಭಕ್ತಿಯಿಂದ ನೆರವೇರಿಸಿದರು.

ಈಗಲೂ ಗುರುಗಳ ಅಪ್ಪಣೆಯಂತೆ ಬಸಾಪುರ, ಮಾನ್ಯರ ಮಸಲವಾಡ, ಮುಂತಾದ ಊರುಗಳಲ್ಲಿ ಕ್ರಿಯಾಬದ್ಧವಾಗಿ ಈ ಕಾರ್ಯ ಸಾಗುತ್ತಿದೆ. ಮಳೆ ಬಾರದಿದ್ದಾಗ ಆಗಿನ ಗುರುಗಳನ್ನು ಕರೆಯಿಸಿಕೊಂಡು ಪಾದೋದಕಾದಿಗಳನ್ನು ಪಡೆಯುವುದರ ಮೂಲಕ ಸಪ್ತ ಭಜನೆ ಎನ್ನುವ ಹೆಸರಿನಲ್ಲಿ ಶಿವ ಪಂಚಾಕ್ಷರಿ ಮಹಾಮಂತ್ರದ ಅವಿರತ ಏಳು ದಿವಸಗಳು ಜಪ ಯಜ್ಞ ಕಾರ್ಯಕ್ರಮಗಳು ನಡೆಯುತ್ತಲೆ ಇರುತ್ತವೆ. ಅಂದಿನ ಪರಂಪರೆ ಇಂದಿಗೂ ಉಳಿದುಕೊಂಡು ಬಂದಿರುವುದು ಚಂದ್ರಶೇಖರ ಶಿವಾಚಾರ್ಯರ ಮಹಿಮೆಗೆ ನಿದರ್ಶನವಾಗಿದೆ.

## ೩.೬ ವ್ಯಾಜ್ಯ - ವ್ಯಸನ (ದಾನ ಕೊಟ್ಟವರು)

ತೆಗ್ಗಿನ ಮಠಕ್ಕೆ ಭಕ್ತಿಯಿಂದ ಮನಃಪೂರ್ವಕವಾಗಿ ಭೂಮಿಯನ್ನು ದಾನವಾಗಿ ಕೊಟ್ಟವರು ಹಲವರು ಅವರಲ್ಲಿ ಹರಪನಹಳ್ಳಿಯ ಶ್ರೀ ಹಾವೇರಿ ಶೀವಪ್ಪ ಶ್ರೀ ಚನ್ನಬಸಪ್ಪ ಮಾನ್ಯರ ಮಸಲವಾಡದ ಕೊಟಗಿ ಕೊಟ್ರಪ್ಪನವರು, ಹೊಸಪೇಟೆಯ ಶ್ರೀ ಬಸೆಟೆಪ್ಪ ಎಂಬುವರು ಪ್ರಮುಖರು ಶ್ರೀ ಚಂದ್ರಶೇಖರ ಶಿವಾಚಾರ್ಯರ ಶಿಷ್ಯ ಯಜಮಾನ ಶ್ರೀ ಸಕ್ರಿ ರಾಘವಾಂಕಪ್ಪ ಹರಪನಹಳ್ಳಿಯಲ್ಲಿಯೇ ದೊಡ್ಡ ಶ್ರೀಮಂತ ಈ ಮಠದ ಪರಮಭಕ್ತ ಒಂದು ದಿನ ಗುರುಗಳ ಹತ್ತಿರ ಬಂದು ಬುದ್ಧಿ ನನ್ನ ಭಕ್ತಿ ಕಾಣಿಕೆಯಾಗಿ ದಾಸೋಹ ಮಠದ ಹತ್ತಿರದ ಜಾಗವನ್ನು ಕೊಡಬೇಕೆಂದು ನಿರ್ಧಾರ ಮಾಡಿರುವೆ ತಾವು ಸ್ವೀಕರಿಸಬೇಕೆಂದು ವಿನಂತಿಸಿಕೊಂಡಾಗ ತಕ್ಷಣ ಒಪ್ಪದ ಪೂಜ್ಯರು ಆ ಜಾಗ ನಮ್ಮ ಮನಸ್ಸಿಗೆ ಹಿಡಿಸಿಲ್ಲ ನಮಗೆ ಸರಿಬಂದಂತೆ ಕಾಣುವುದಿಲ್ಲವೆಂಬ ಅನುಮಾನವನ್ನು ವ್ಯಕ್ತಪಡಿಸಿದರು ಆದರೂ ಹಠಮಾಡಿ ಬುದ್ಧಿ ನೀವೆ ಹೀಗೆ ಅಂದರೆ ಹೇಗೆ ಎಂದು ಆ ಜಾಗವನ್ನು ಗುರುಗಳಿಗೆ ಒತ್ತಾಯ ಮಾಡಿ ಒಪ್ಪಿಸಿ ಅವರ ಆಶಿರ್ವಾದ ಪಡೆದಿದ್ದ ಈತನು ತೀರಿಕೊಂಡ ನಂತರದಲ್ಲಿ ಈತನ ಪತ್ನಿ ಶ್ರೀಮತಿ ಸಕ್ರಿ ನೀಲಮ್ಮ ಗುರುಗಳಿಗೆ ಕೊಟ್ಟ ಜಾಗವನ್ನು ತಮ್ಮ ಮನೆಯ ಉಪಯೋಗಕ್ಕೆ ಬಳಸಿಕೊಳ್ಳಲು ಆರಂಭಿಸಿದಳು ಇದನ್ನು ತಿಳಿದ ಶ್ರೀಗಳವರು ದಾನ ಕೊಟ್ಟ ಮೇಲೆ ಹೀಗೆ ಮಾಡುವುದು ಒಳ್ಳೆಯದಲ್ಲವೆಂದು ತಿಳಿಸಿದರೂ ಕೇಳದೇ ಮಂದಿಯ ಮಾತು ಕೇಳಿ ಜಾಗದಲ್ಲೇ ತಕರಾರು ತೆಗೆದಳು. ಈ ಘಟನೆ ಸ್ವಾಮಿಗಳಿಗೆ ಬೇಸರ ತಂದಿತು ಕೊನೆಗೂ ಈ ವ್ಯವಹಾರವನ್ನು ಕೋರ್ಟಿನವರೆಗೂ ತೆಗೆದುಕೊಂಡು ಹೋದಳು.

ಶ್ರೀ ಚಂದ್ರಶೇಖರ ಸ್ವಾಮಿಗಳು ಅನಿವಾರ್ಯವಾಗಿ ಈ ಜಾಗದ ಸಂಬಂಧ ಕೋರ್ಟಿಗೆ ಹೋಗುವ ಪ್ರಸಂಗ ಬಂದಿತು. ದೇವರೆ ನಮ್ಮಂಥವರಿಗೆ ಕೋರ್ಟಿನ ವ್ಯವಹಾರ ಯಾಕ ಬಂತು ಎಂದು ಚಿಂತಿಸಿ ಈ ವ್ಯವಹಾರ ನೋಡಿಕೊಳ್ಳಲು ತೆಗ್ಗಿನಮಠದ ಶ್ರೀ ಪಂಚಾಕ್ಷರಯ್ಯ ಅವರಿಗೆ ವಹಿಸಿದರು ಈ ವ್ಯಾಜ್ಯ ಹೊಸಪೇಟೆ, ಬಳ್ಳಾರಿ, ಮದ್ರಾಸ್ ನ್ಯಾಯಾಲಯದವರೆಗೂ ಹೋಯಿತು. ಕೋರ್ಟಿನ

ವ್ಯವಹಾರ ಆರಂಭವಾದಾಗಿನಿಂದ ವ್ಯಸನ ಹಿಡಿದು ಚಿಂತಾಕ್ರಾಂತರಾದರು. ಈ ವ್ಯವಹಾರಕ್ಕಾಗಿ ಹಣವನ್ನು ಶಿಷ್ಯರಲ್ಲಿ ಸಂಗ್ರಹಿಸಿಕೊಡಲು ಬಹುಶ್ರಮಪಟ್ಟರು. ಶ್ರೀಮತಿ ಸಕ್ರಿ ನೀಲಮ್ಮ ತಮ್ಮ ಶ್ರೀಮಂತಿಕೆಯ ಮುಂದೆ ಇವರೇನು ಹೋರಾಡಿ ಜಯ ಸಾಧಿಸುತ್ತಾರೆ ಹಣದ ಬಲ ನನಗಿದೆ ಎಂದು ಭಾವಿಸಿದ್ದಳು ಎಂಬ ಭರ್ತೃಹರಿಯ ಮಾತಿನಂತೆ ನ್ಯಾಯಮಾರ್ಗದಲ್ಲೇ ಹೊರಟರು ವ್ಯವಹಾರ ನೈಪುಣ್ಯ ಕಾರ್ಯದಕ್ಷತೆಗೆ ಹೆಸರಾಗಿದ್ದ ಶ್ರೀ ಪಂಚಾಕ್ಷರಯ್ಯನವರು ಗುರುಗಳ ಆಶೀರ್ವಾದದಿಂದ ಈ ಕೋರ್ಟಿನ ವ್ಯಾಜ್ಯದಲ್ಲಿ ಬಹಳಷ್ಟು ಶ್ರಮವಹಿಸಿ ಜಯ ಸಾಧಿಸಿದರು ಗುರುಶಾಪದಿಂದ ಶ್ರೀ ರಾಘವಾಂಕಪ್ಪನ ಮನೆತನಕ್ಕೆ ಸಂತಾನ ಭಾಗ್ಯವೇ ಇಲ್ಲದಾಯಿತು. ಗುರುಗಳ ಬಗ್ಗೆ ಅಪಾರ ಭಯ, ಭಕ್ತಿ ಇಟ್ಟುಕೊಂಡಿದ್ದ ಪಂಚಾಕ್ಷರಯ್ಯನವರು ಮಠದ ಪ್ರತಿಯೊಂದು ಕೆಲಸವನ್ನು ಶ್ರದ್ಧೆಯಿಂದ ಮಾಡಿ ಸ್ವಾಮಿಗಳವರ ಕೃಪಾಶೀರ್ವಾದದಿಂದ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದರು ಕೋರ್ಟಿನ ವ್ಯವಹಾರದಲ್ಲಿ ಅವರು ವಹಿಸಿದ ಪಾತ್ರ ಶ್ಲಾಘನೀಯ.

## ಚಂದ್ರಶೇಖರ ಶಿವಾಚಾರ್ಯರ ಪವಾಡಗಳು

### ೩.೭. ಜಲದಿಂದ ಜ್ಯೋತಿ ಪ್ರಕಾಶಿಸಿದ್ದು

ಗುರುಗಳು ಸಹಜ ನಡವಳಿಕೆಯಲ್ಲಿ ಲೌಕಿಕ ಪವಾಡಗಳನ್ನು ಕಂಡುಕೊಳ್ಳುತ್ತಿದ್ದರು. ಅರ್ಥಪೂರ್ಣ ಮೌಲ್ಯಯುತ ಸತ್ವಗಳ ಪ್ರತಿರೂಪವಾಗಿದ್ದರು ಎಂಬುದು ಕಂಡು ಉಂಡು ಅನುಭವಿಸಿದ ಭಕ್ತರ ಆಳದೊಳಗಿನ ಅಭಿಮತ ಒಮ್ಮೆ ದಾಸೋಹಕ್ಕಾಗಿ ಧಾನ್ಯ ಸಂಗ್ರಹಿಸಲು ಗೌರಿಹಳ್ಳಿಗೆ ದಯಮಾಡಿಸಿದ ಸುದ್ದಿ ತಿಳಿದ ಭಕ್ತರೆಲ್ಲರು ಭಜನೆ- ಮಂಗಳವಾದ್ಯಗಳೊಡನೆ ಪೂಜ್ಯರನ್ನು ಬರಮಾಡಿಕೊಂಡರು ಅಂದು ಆ ಗ್ರಾಮದ ಶ್ರೀ ಸಕ್ರಪ್ಪನವರ ಸಕ್ರಜ್ಜ ದೊಡ್ಡಬಸಪ್ಪ ಎಂಬುವರು ಮನೆಯಲ್ಲಿ ಶಿವ ಪೂಜೆ ಆನಂದವಾಗಿ ಲಿಂಗಪೂಜೆಯಲ್ಲಿ ತಲ್ಲೀನರಾಗಿದ್ದಾರೆ. ಆ ಸಮಯದಲ್ಲಿ ಪಕ್ಕದ ಮನೆಯಲ್ಲಿ ನಡೆದಿರುವ ಗದ್ದಲ ಏನೆಂದು ನೋಡಲು ಮನೆಯವರೆಲ್ಲರೂ ಹೊರಗೆ ಬಂದರು ಇಂತಹ ಪೂಜೆ ಹಚ್ಚಿ ಇಟ್ಟ ದೀಪದ ಎಣ್ಣೆ ತೀರಿ ಅದು ಶಾಂತವಾಗುವ ಸ್ಥಿತಿಯಲ್ಲಿರುವುದನ್ನು ಕಂಡರು. ಮನೆಯವರು ಯಾರು ಒಳಗೆ ಇಲ್ಲ ಆಗ ಗುರುಗಳು ಶಿವನೇ ನಿನ್ನ ಪೂಜೆ ನಡೆದಿದೆ ವಿಘ್ನ ಬಾರದಿರಲಿ ಎಲ್ಲವೂ ನಿನ್ನನ್ನೇ ಕೂಡಿದೆ ಎಂದು ಇಟ್ಟಿದ್ದ ನೀರನ್ನೇ ದೀಪಕ್ಕೆ ಹಾಕಿದರು ಗುರುವಿನ ಮಹಾತ್ಮೆ ಶಾಂತವಾಗಬೇಕಿದ್ದ ಜ್ಯೋತಿ ಶಾಂತವಾಗದೇ ಪೂಜೆ ಮುಗಿಯುವವರೆಗೂ ಪ್ರಕಾಶಮಯವಾಗಿ ಬೆಳಗಿತು. ಗದ್ದಲದಲ್ಲಿ ಮಗ್ನರಾಗಿದ್ದ ಮನೆಯವರಿಗೆ ತಕ್ಷಣ ಅರಿವಾಗಿ ಪೂಜೆಗೆ ಗುರುಗಳು ಕುಳಿತಿದ್ದಾರೆ ಏನೇನು ಬೇಕಾಗಿದೆ ಕೇಳಬೇಕೆಂದು ಬಂದಾಗ ಗುರುಗಳು ಎಲ್ಲಾ ಶಿವನ ಕೃಪೆ ಜಲದಿಂದ ಜ್ಯೋತಿ ಪ್ರಕಾಶವಾಗಿ ಬೆಳಗುವಂತಾಯಿತು ಎಂದು ತಿಳಿಸಿದರು ಪ್ರತ್ಯಕ್ಷ ಕಂಡ ಘಟನೆಯಿಂದ ಮನೆಯವರೆಲ್ಲರೂ ಸ್ವಾಮಿಗಳ ವ್ಯಕ್ತಿತ್ವವನ್ನು ಕೊಂಡಾಡಿದರು ಗೌರಿಹಳ್ಳಿಯ ಗ್ರಾಮದಜನತೆಗೆ ಶ್ರೀಗಳವರ ಕತೃತ್ವ ಶಕ್ತಿಯ ಅರಿವಾಯಿತು. ಆದರೆ ವೈಜ್ಞಾನಿಕವಾಗಿ ನೋಡಿದಾಗ ಆ ಜ್ಯೋತಿ ಬೆಳಗಿದ್ದು ಏಕೆಂದರೆ ಬತ್ತಿ ಚಿಕ್ಕದಾದ ಸಮಯದಲ್ಲಿ ಬತ್ತಿಗೆ ಪಣತಿಯ ತಳಬಾಗದಲ್ಲಿರುವ ತೈಲ ಸಿಗುವುದಿಲ್ಲ ಆಗ ನೀರನ್ನು ಅದಕ್ಕೆ ಹಾಕಿದಾಗ ಎಣ್ಣೆ

ಮೇಲಕ್ಕೆ ಬಂದು ನೀರು ಕೆಳಗಿನ ಭಾಗಕ್ಕೆ ಹೋಗಿ ತೈಲ ಮೇಲೆ ಬರುತ್ತದೆ. ಏಕೆಂದರೆ ನೀರಿನ ತೂಕ ಹೆಚ್ಚಾಗಿರುವದರಿಂದ ಎಣ್ಣೆಯ ತೂಕ ಕಡಿಮೆ ಇರುವುದರಿಂದ ತೈಲವು ಮೇಲೆ ಬಂದು ಬತ್ತಿಗೆ ಸಿಗುತ್ತದೆ. ಆಗ ದೀಪವು ಚೆನ್ನಾಗಿ ಉರಿಯುತ್ತದೆ. ಪೂಜ್ಯರ ಪೂಜೆಯಿಂದ ಭೂತ - ಪಿಶಾಚಿ - ಪೀಡೆಗ್ರಹ ಚೇಷ್ಠೆ ದು:ಖ ದಾರಿದ್ರ್ಯಗಳು ಕಲಹಗಳು ತಮ್ಮಷ್ಟಕ್ಕೆ ತಾವೇ ನಿವಾರಣೆಯಾಗಿವೆ ಇಂತಹ ಹಲವು ಹತ್ತು ಉದಾಹರಣೆಗಳನ್ನು ಈಗಲೂ ಹರಪನಹಳ್ಳಿಯ ಸುತ್ತಮುತ್ತಲಿನ ಜನಪದರು ಹೇಳುತ್ತಾರೆ.

### ೩.೮. ದರೋಡೆಕೋರರ ಮನ ಪರಿವರ್ತನೆ

ಮಠದಲ್ಲಿ ನಿರಂತರವಾಗಿ ನಡೆಯುತ್ತಿದ್ದ ದಾಸೋಹಕ್ಕಾಗಿ ಭಕ್ತರಿಂದ ಧಾನ್ಯ ಹಣ, ಸಂಗ್ರಹಿಸಲು ಈ ಧರ್ಮ ಮೂರ್ತಿಗಳು "ಪಟ್ಟಣಕ್ಕೆ ಪಂಚರಾತ್ರಿ" ಹಳ್ಳಿಗೆ ಏಕರಾತ್ರಿ" ಎಂಬಂತೆ ಸವಾರಿ ಬಂಡಿಯಲ್ಲಿ ಸಂಚಾರ ಮಾಡುತ್ತಾ ಒಂದು ಸಲ ತಲವಾಗಲು ಗ್ರಾಮಕ್ಕೆ ದಯಮಾಡಿಸಿದರು ಆ ಸಮಯದಲ್ಲಿ ಸುತ್ತಮುತ್ತ ಮಳೆಯಾಗಿರಲಿಲ್ಲ.

ಪೂಜ್ಯರು ದಯಮಾಡಿಸಿದ ರಾತ್ರಿಯೇ ಮಳೆಯಾಯಿತು. ಮಳೆಯಿಲ್ಲದೇ ಕಂಗಾಲಾಗಿದ್ದ ಜನತೆ ಸಮೃದ್ಧಿ ಮಳೆಯಿಂದಾಗಿ ಸಂತೋಷಭರಿತರಾದರು ಬೆಳಿಗ್ಗೆ ಕಾಣಿಕೆ ಸಂಗ್ರಹಿಸಲು ಊರಲ್ಲಿ ದಯಮಾಡಿಸಿದರು ಪ್ರತಿವರ್ಷ ೫ ಚೀಲ ಧಾನ್ಯ ಸಂಗ್ರಹವಾಗುತ್ತಿದ್ದರೆ ಆ ವರ್ಷ ೧೨ ಚೀಲ ಧಾನ್ಯ ಸಂಗ್ರಹವಾಯಿತು. ಅಕ್ಕಪಕ್ಕದ ಗ್ರಾಮಗಳಲ್ಲಿ ಸಂಚರಿಸಿ ಹರಪನಹಳ್ಳಿಗೆ ಪುನ: ಮರಳುವ ಮಾರ್ಗದಲ್ಲಿ ಸುತ್ತಮುತ್ತಲೂ ಅಡವಿ ಜನಸಂಚಾರವು ಕಡಿಮೆ. ಸಾಯಂಕಾಲ ತ್ರಿಕಾಲ ಜಪ ಮಾಡುವ ಪದ್ಧತಿಯಂತೆ ಅಲ್ಲೇ ಒಂದು ಬಿಲ್ವಪತ್ರಿ ಮರದ ಹತ್ತಿರ ಜಪಕ್ಕೆ ಕುಳಿತರು.

ಆ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ದರೊಡೆಕೋರರ ಒಂದು ಗುಂಪು ಅಲ್ಲಿಗೆ ಬಂದಿತು. ಬಂಡಿಸವಾರ ಸೇವಕ ಇಬ್ಬರೂ ಇವರನ್ನು ಕಂಡು ಹೆದರಿ ಹೌಹಾರಿದರು ಎಲ್ಲವನ್ನು ತ್ಯಾಗ ಮಾಡಿದ ಪೂಜ್ಯರಿಗೆ ಯಾವ ಹೆದರಿಕೆ . ಅವರೇ ದರೊಡೆಕೋರರಿಗೆ  ನಮ್ಮ ಹತ್ತಿರ ಏನಿದೆ ಅಂತ ಬಂದ್ರೆಪ್ಪ ನಿಮಗೆ ಯಾವ ಯಾವ ತೊಂದರೆಯಾಗಿದೆ ಎಂದು ಈ ಕಾರ್ಯಕ್ಕೆ ನಿಂತಿರುವಿರಿ. ಇದು ಒಳ್ಳೆಯದಲ್ಲ ದುಡಿದು ಊಟ ಮಾಡಿರಿ ಪರರನ್ನು ಪೀಡಿಸಿ ಅವರ ಸಂಪತ್ತನ್ನು ಅಪಹರಿಸುವುದು ಒಳ್ಳೆಯದಲ್ಲ. ನಿಮಗೆ ಜೀವನ ನಡೆಸಲು ತೊಂದರೆಯಾಗಿದ್ದರೆ  ಇದೋ ನಮ್ಮ ಬೆಳ್ಳಿ ಪೂಜಾ ಸಾಮಗ್ರಿಗಳಿವೆ ಇವುಗಳನ್ನು ತೆಗೆದುಕೊಂಡು ಹೋಗಿರಿ ಎಂದು ಹೇಳಿ ಪೂಜಾ ಪೆಟ್ಟಿಗೆ ತೆರೆಯಲು ಹೊಳೆಯುವ ಬೆಳ್ಳಿ ಪೂಜಾ ಸಾಮಗ್ರಿಗಳನ್ನು ನೋಡಿದ ಕೂಡಲೇ ಅವರ ಕಣ್ಣುಗಳು ಕುಕ್ಕಿದಂತಾಗಿ ಕ್ಷಣಕಾಲ ಏನೂ ತೋಚದಂತಾಗಿ ದಿಗ್ಭ್ರಾಂತರಾದರು.

ಈ ತೇಜೋಮೂರ್ತಿಗಳ ದಿವ್ಯ ತೇಜಸ್ಸಿಗೆ ಶರಣಾಗಿ ದರೋಡೆಕೋರರು ಬುದ್ದಿ ತಿಳಿಯದೇ ನಿಮ್ಮ ಹತ್ತಿರ ಬಂದದ್ದು ತಪ್ಪಾಯಿತು ನೀವು ತಿಳಿದಂತೆ ಇನ್ನು ಕೆಟ್ಟ ಕೆಲಸ ಕೈ ಬಿಟ್ಟು ಒಳ್ಳೆಯ ಮಾರ್ಗದಲ್ಲಿ ನಡೆದುಕೊಳ್ಳುತ್ತೇವೆ ಇಂದು ನಿಮ್ಮ ದರ್ಶನದಿಂದ ನಮ್ಮ ಪಾಪ ಪರಿಹಾರವಾಯಿತು

ನಮ್ಮನ್ನು ಕ್ಷಮಿಸಬೇಕೆಂದು ಬೇಡಿಕೊಂಡರು ಆಗ ಗುರುಗಳು ನಿಜವಾಗಿ ನಿಮ್ಮ ಮನಸ್ಸು ಪರಿವರ್ತನೆ ಆಗಿದ್ದರೆ ಒಳ್ಳೆಯದು ನೀವು ಇನ್ನು ಹೋಗಿರೆಂದಾಗ ಈ ರಾತ್ರಿ ವೇಳೆ ನಿಮ್ಮನ್ನು ಸುರಕ್ಷಿತವಾಗಿ ತಲುಪಿಸುವ ಜವಬ್ದಾರಿ ನಮ್ಮದು ಎಂದು ಹೇಳಿ ದರೊಡೆಕೋರರು ಬಂಡಿಸಂಗಡ ಬಂದರು . ಅಂದಿನ ಘಟನೆಯನ್ನು ಸೇವಾ ಮರಿಯಾಗಿದ್ದ ನೀಲಗುಂದ ಕೋಟ್ರಬಸಯ್ಯನವರು ಇಂದಿಗೂ ನೆನಪಿಸಿಕೊಂಡು ಪೂಜ್ಯರ ದಿವ್ಯ ವ್ಯಕ್ತಿತ್ವವನ್ನು ಭಕ್ತಿಯಿಂದ ಸ್ಮರಿಸುತ್ತಾರೆ

## ೩.೯ ಕಾಲಜ್ಞಾನ ತಿಳಿಸಿದ್ದು

ನಿತ್ಯ ತ್ರಿಕಾಲ ಜಪ ಶಿವಪೂಜೆ ಅನುಷ್ಠಾನದಿಂದಾಗಿ ಸ್ವಾಮಿಗಳವರಿಗೆ ಯೋಗಬಲ ಬಂದಿತ್ತು ಅವರ ನುಡಿ ಎಂದೂ ಹುಸಿಯಾಗಿರಲಿಲ್ಲ. ದಾಸೋಹಕ್ಕಾಗಿ ಕಾಣಿಕೆ ಸಂಗ್ರಹ ಇದರ ಜೊತೆಗೆ ಧರ್ಮ ಪ್ರಚಾರ ಕಾರ್ಯ ಎರಡನ್ನು ಕೈಗೊಂಡು ಸಂಚಾರ ಮಾಡುತ್ತಿದ್ದರು. ಹರಪನಹಳ್ಳಿ ತಾಲೂಕು ಅಲ್ಲದೇ ಕೂಡ್ಲಿಗಿ ಹಡಗಲಿ ತಾಲೂಕುಗಳಲ್ಲಿ ಪ್ರಯಾನ ಬೆಳೆಸುತ್ತಿದ್ದರು. ಹೂವಿನಹಡಗಲಿ ಮಾರ್ಗವಾಗಿ ಎಲ್ಲೇ ಹೋಗಬೇಕಾದರೂ ಹೂವಿನಹಡಗಲಿಯಲ್ಲಿರುವ ತಮ್ಮ ಹಿಂದಿನ ಗುರುಗಳಾದ ಶ್ರೀ ಕಾಶಯ್ಯ ಮಹಾಸ್ವಾಮಿಗಳ ಗದ್ದಿಗೆಯ ದರ್ಶನ ಪಡೆದುಕೊಂಡು ಹೋಗುತ್ತಿದ್ದರು.

ಒಮ್ಮೆ ಹಿರೇಹಡಗಲಿ ಪಕ್ಕದ ಮಾನಿಹಳ್ಳಿ ಎಂಬ ಚಿಕ್ಕ ಗ್ರಾಮಕ್ಕೆ ದಯಮಾಡಿಸಿದರು. ಅಲ್ಲಿ ಪ್ರತಿಯೊಬ್ಬರ ಮನೆಗೂ ತೆರಳಿಕಾಣಿಕೆ ಕೇಳಲು ಹೊರಟಾಗ ಓರ್ವ ಒಕ್ಕಲಿಗನ ಮನೆಗೆ ಬಂದಾಗ ಸ್ವಾಮಿಗಳಿಗೆ ಹಣ ಕೊಡಬೇಕಾಗುತ್ತದೆ ಎಂದು ತಿಳಿದು ಒಳಗಿದ್ದ ಮನೆಯ ಯಜಮಾನ ಇಲ್ಲವೆಂದು ತನ್ನ ಹೆಂಡತಿ ಸಂಗಡ ಹೇಳಿಸಿದ ತ್ರಿಕಾಲ ಜ್ಞಾನಿಗಳಾಗಿದ್ದ ಗುರುಗಳಿಗೆ ಇದು ತಿಳಿಯಿತು. ಹಾಗೇ ಆಗಲಿ ಎಂದಷ್ಟೆ ನುಡಿದು ಬಂದರು ಗುರುಗಳನ್ನು ವಂಚಿಸಿದ ಆ ವ್ಯಕ್ತಿ ಕೆಲವೇ ದಿನಗಳಲ್ಲಿ ಗಂಡಾಂತರದಲ್ಲಿ ಸಿಕ್ಕು ಮರಣ ಹೊಂದಿದ

## ೩.೧೦ ಸಂತಾನಭಾಗ್ಯ ಕರುಣಿಸಿದ್ದು

ಸಂತಾನವಿಲ್ಲದೇ ಜೀವನದಲ್ಲಿ ಬೇಸತ್ತ ದಂಪತಿಗಳಿಗೆ ಸಂತಾನ ಭಾಗ್ಯ ಅನುಗ್ರಹಿಸಿದ ದೃಷ್ಟಾಂತಗಳು ಸಾಕಷ್ಟಿವೆ ಒಬ್ಬ ತೌಡೂರು ಗ್ರಾಮದ ಶ್ಯಾನುಬೋಗರ ವೀರಪ್ಪ ಮತ್ತು ಆತನ ಪತ್ನಿ ಶ್ರೀಮತಿ ಕೊಟ್ರಮ್ಮ ತೆಗ್ಗಿನಮಠಕ್ಕೆ ಬಂದು ಶ್ರೀ ಗುರು ವರ್ಯರಲ್ಲಿ ತಮಗೆ ಮಕ್ಕಳಿಲ್ಲದೇ ಉಂಟಾಗಿರುವ ಸಂಕಷ್ಟವನ್ನು ತೋಡಿಕೊಂಡರು ಇಂತಹ ಸಮಯದಲ್ಲಿ ಜನಪದ ಗರತಿಯರು ಶಿವಾಚಾರ್ಯರಲ್ಲಿ ಹೀಗೆ ನಿವೇದಿಸಿಕೊಳ್ಳುತ್ತಾರೆ.

"ತೆಗ್ಗಿನ ಮಠದ ಸ್ವಾಮಿ ಗಂಡು ಮಗನ ಕೊಡು
ಚೆಂಡು ಹೂವಿನಂತೆ ಚೆಲುವನ ! ಕೊಟ್ಟರೆ
ಮಂಡಕ್ಕಿ ತೇರ ಎಳಿಸೇನ"

ಎಂದು ಹೀಗೆ ಭಕ್ತಿಯಿಂದ ಸ್ತ್ರೀ ಕೇಳಿಕೊಂಡಾಗ ಶಿವಾಚಾರ್ಯರು ದಂಪತಿಗಳಿಗೆ ಖಂಡಿತ ಸಂತಾನಫಲ ಪ್ರಾಪ್ತಿಯಾಗುತ್ತದೆ ಎಂದು ಆಶೀರ್ವದಿಸಿ, ಚಿಂತೆ ಮಾಡಬೇಡಿ ಗುರುಗಳಲ್ಲಿ ನಂಬಿಕೆ ಇರಲಿ ಎಂದುಹೇಳಲಾಗಿ ಸ್ವಾಮಿಗಳ ವಾಣಿಯಂತೆ ಆ ದಂಪತಿಗಳಿಗೆ ವರ್ಷ ತುಂಬುವುದರೊಳಗಾಗಿ ಒಂದು ಗಂಡು ಮಗು ಜನ್ಮತಾಳಿತು ಆ ಕೂಸಿಗೆ ಪೂಜ್ಯರ ಹೆಸರನ್ನು ನಾಮಕರಣ ಮಾಡಿದರು.

ಇದನ್ನು ತಿಳಿದ ಹರಪನಹಳ್ಳಿಯ ಸುತ್ತಮುತ್ತಲಿನ ಮಕ್ಕಳಾಗದ ದಂಪತಿಗಳು ಬಂದು ಶಿವಾಚಾರ್ಯರ ಹತ್ತಿರ ಮಕ್ಕಳ ಸಂತಾನ ಭಾಗ್ಯ ದಯಪಾಲಿಸಿರೆಂದು ಬೇಡಿಕೊಳ್ಳುತ್ತಿದ್ದರು. ಹೀಗೆ

"ಮಕ್ಕಳ ಕೊಡು ಶಿವನೇ ಮದುವೀಯ ಮಾಡೇನ
ಹಚ್ಚಿ ಕೆಮ್ಮಣ್ಣ ಒಲಿಕೊರಿದು! ಮಾಡೇನು
ಚೊಚ್ಚಲ ಮಗನ ಮದುವೀನ"

ಮಕ್ಕಳ ಸಂತಾನವಿಲ್ಲದ ಗರತಿಯರು ಸಂತಾನವಾದರೆ ನಿನ್ನ ನಾಮಕರಣ ಮಾಡುವುದರ ಜೊತೆಗೆ ಮನೆಯನ್ನು ತೊಳೆದು ಬಳಿದು ಸಿಂಗರಿಸಿ ಒಲಿಯನ್ನು ಕೆಮ್ಮಣ್ಣಿನಿಂದ ಹೊಸದನ್ನಾಗಿ ನಿರ್ಮಾಣ ಮಾಡಿ ಮೊದಲ ಮಗನ ಮದುವೆಯನ್ನು ನಿಮ್ಮ ಆಶೀರ್ವಾದಿಂದ ಮಾಡುತ್ತೇವೆಂದು ವ್ಯಕ್ತಪಡಿಸುತ್ತಾರೆ.

ಮಠದ ಆಸ್ತಿಯನ್ನು ಕಬಳಿಸಿ ಪೂಜ್ಯರಲ್ಲಿ ಸುಳ್ಳು ಹೇಳಿದವರಾರೂ ಜೀವನದಲ್ಲಿ ಉದ್ಧಾರವಾಗಿಲ್ಲ ಎಂಬುದಕ್ಕೆ ಯಲ್ಲಾಪುರ ಗ್ರಾಮದಲ್ಲಿ ನಡೆದ ಘಟನೆಯೇ ಸಾಕ್ಷಿ. ಶ್ರೀಗಳವರಿಗೆ ಕೃಷಿ ಬಗ್ಗೆ ಒಲವು. ಪ್ರತಿನಿತ್ಯ ತಮ್ಮ ಮಠದ ಹೊಲಗಲನ್ನು ನೋಡಿಕೊಂಡು ಬರುತ್ತಿದ್ದರು. ಆದರೆ ದೂರದ ಯಲ್ಲಾಪುರದ ಹೊಲಕ್ಕೆ ಹೋಗುತ್ತಿರಲಿಲ್ಲ ತೆಂಗು, ಮಾವಿನ ಮರಗಳಿದ್ದ ಆ ಜಮೀನನ್ನು ಗಿರಿಯಪ್ಪ ಎಂಬ ರೈತನಿಗೆ ಊಳಲು ಕೊಟ್ಟಿದ್ದರು ಮಠದವರು ಯಾರೂ ಬಂದು ನೋಡುವುದಿಲ್ಲವೆಂದು ತಿಳಿದ ಗಿರಿಯಪ್ಪ ಆ ಹೊಲದ ಫಸಲನ್ನು ಮಠಕ್ಕೆ ಸರಿಯಾಗಿ ಕೊಡದೇ ಪ್ರತಿವರ್ಷ ತಾನೇ ಉಪಯೋಗಿಸಿಕೊಂಡು ಏನನ್ನಾದರೂ ಸುಳ್ಳು ಹೇಳುತ್ತಿದ್ದ ಗುರುಗಳು ಬೆಳೆ ಬಗ್ಗೆ ವಿಚಾರಿಸಿದರೆ ಬುದ್ದಿ ಹುಲ್ಲು ಬಿದ್ದು ದನಗಳು ತಿಂದು ಎಲ್ಲಾ ಹಾಳಾಗಿದೆ ಎನ್ನುತ್ತಿದ್ದ, ತೆಂಗಿನ ಕಾಯಿಗಳನ್ನು ತರಲಿಲ್ಲವೆಂದರೆ ಇಲ್ಲ ಬುದ್ದಿ ಮಂಗಗಳೆಲ್ಲಾ ತಿಂದು ಕೆಡವಿ ಹಾಳು ಮಾಡಿವೆ ಎಂದು ಹೇಳುತ್ತಿದ್ದ.

ಇದನ್ನು ಕೇಳಿದ ಗುರುಗಳು "ರೀ ಯಪ್ಪ ಈ ರೀತಿ ಪ್ರತಿ ವರ್ಷ ಸುಳ್ಳು ಹೇಳುವುದು ನಿನಗೆ ಒಳ್ಳೆಯದಲ್ಲ. ನಿನಗೇ ತೊಂದರೆಯಾಗಿದ್ದರೆ ಫಸಲನ್ನು ಬಳಸಿಕೊಂಡಿದ್ದರೆ ಪ್ರಮಾಣಿಕವಾಗಿ ಹೇಳು ಕ್ಷಮಿಸುತ್ತೇವೆ "ಹರ ಮುನಿದರೆ ಗುರು ಕಾಯುವನು", "ಗುರು ಮುನಿದರೆ ಹರನು ಕಾಯಲಾರ" ಸತ್ಯವನ್ನು ನುಡಿ ಒಳ್ಳೆಯದಾಗುತ್ತದೆ ಎಂದರು ಸುಳ್ಳನ್ನೇ ಹೇಳುತ್ತಾ ಗುರುಗಳನ್ನು ವಂಚಿಸಿದ ಫಲದಿಂದಾಗಿ ಈತನ ಮನೆಯೇ ಉದ್ಧಾರವಾಗಲಿಲ್ಲ. ಇದ್ದ ಒಬ್ಬ ಮಗಳಿಗೂ ಗಂಡು ಸಂತಾನವಾಗದೇ ಮನೆತನವೇ ನಾಶವಾಯಿತು. ಇಂತಹ ಅನೇಕ ಘಟನೆಗಳು ಜರುಗಿವೆ.

## ಶಿವಾಚಾರ್ಯರ ಕೊನೆಯ ದಿನಗಳು

ಕೋರ್ಟಿನ ವ್ಯಾಜ್ಯದಿಂದಾಗಿ ವ್ಯಸನ ಹಿಡಿದಿದ್ದ ಶ್ರೀಗಳವರ ಆರೋಗ್ಯವು ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ ಬಂದಿತು. ತಾವು ಲಿಂಗೈಕ್ಯರಾಗುವುದು ಸಮೀಪವಾಗಿದೆ ಎಂದು ತಮ್ಮ ದಿವ್ಯ ದೃಷ್ಟಿಯಿಂದರಿತುಕೊಂಡು ಊರಿನ ಪ್ರಮುಖರನ್ನು ಮಠಕ್ಕೆ ಕರೆಸಿಕೊಂಡು ಅವರ ಮುಂದೆ ತಮಗೆ ಶಿವನ ಅಪ್ಪಣೆಯಾಗಿದೆ ಇನ್ನೂ ನಾವು ಆತನ ಸನ್ನಿಧಾನ ಸೇರಬೇಕಾಗಿದೆ ಅದಕ್ಕಾಗಿ ಮುಂದೆ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಯಾರನ್ನು ನೇಮಿಸಬೆಕು ಎಂಬ ವಿಷಯವನ್ನು ಪ್ರಸ್ತಾಪಿಸಿದರು

ಪರಮ ಶಿವಯೋಗಿಗಳು ನಮ್ಮನ್ನಗಲಿ ದಯಮಾಡಿಸುವರೆಂಬುದನ್ನು ತಿಳಿದ ಭಕ್ತರಿಗೆ ಊರಿನ ಹಳ್ಳಿಗರಿಗೆ ಆಕಾಶವೇ ಕಳಚಿ ಬಿದ್ದಂತಾಯಿತು.ತಾಯಿಯನ್ನು ಕಳೆದುಕೊಂಡ ಕರುವಿನಂತೆ ಚಡಪಡಿಸಿದರು ಭಕ್ತರ ಅನುಪಾತವನ್ನು ಅರಿತು ಪೂಜ್ಯರು ಪುನ: ಅವರನ್ನೆಲ್ಲ ಸಂತೈಸಿದರು. ಮಠದ ಉತ್ತರಾಧಿಕಾರಿಯನ್ನು ನಿಮ್ಮ ಇಷ್ಟದಂತೆ ಮಾಡಿರಿನಮಗೆ ಒಪ್ಪಿಗೆ ಇದೆ ಎಂದು ನೆರೆದ ಹಿರಿಯರು ಅಭಿಪ್ರಾಯ ಪಟ್ಟಾಗ, ಗುರುಗಳು ನಮ್ಮ ವಂಶ ಕಡಲರತ್ನ ಪ್ರಾಯವಾಗಿರುವ ಬಾಲಕ ಚಂದ್ರಮೌಳಿ ಯೋಗ್ಯವೆಂದು ನಮ್ಮ ಭಾವನೆ ಎಂದರು. ಎಲ್ಲರು ಇದಕ್ಕೆ ಒಪ್ಪಿದರು ಅಂದೇ ಎಲ್ಲರ ಸಮಕ್ಷಮ ಮೃತ್ಯು ಪತ್ರ (ವಿಲ್) ಬರೆಯಿಸಿದರು.

ಒಂದು ವಾರ ಕಳೆಯಿತು ಶ್ರೀಗಳವರು ಚಳಿಜ್ವರದಿಂದಾಗಿ ನಿಶ್ಶಕ್ತಿಯಾಗಿ ಅವರ ಆರೋಗ್ಯ ಸುಧಾರಿಸುವ ಲಕ್ಷಣಗಳು ಕಾಣಲಿಲ್ಲ. ಪೂಜ್ಯರ ಸ್ವಪ್ನದಲ್ಲಿ ತಮ್ಮ ಗುರುಗಳು ಆಗಿಂದಾಗ್ಗೆ ದರ್ಶನ ಕೊಡುತ್ತಿದ್ದರು. ಕೆಲವು ದಿವಸಗಳಿಂದ ಅವರ ದರ್ಶನವು ಸ್ವಪ್ನದಲ್ಲೆ ದೊರೆಯದೇ ಇದ್ದದ್ದು ಅವರನ್ನೇ ಇನ್ನಷ್ಟು ಚಿಂತನೆಗೆ ಈಡುಮಾಡಿತ್ತು. ಸದಾ ರೇಣುಕ ರೇಣುಕ ಶಿವ ಶಿವ ಎಂದು ಜಪಿಸುತ್ತಿದ್ದರು. ಅಂತಿಮ ಕಾಲದಲ್ಲಿ ಜಗದ್ಗುರುಗಳ ದರ್ಶನ ಆಶೀರ್ವಾದ ಪಡೆಯಬೇಕೆಂದು ಬಯಸಿದರು. 'ಯದ್ ಭಾವ ತದ್ ಭವತಿ' ಎನ್ನುವಂತೆ ಎಂತಹ ಧ್ಯಾನ ಮನದಲ್ಲಿ ತುಂಬಿಕೊಂಡಿದ್ದರೂ ಅದೇ ಭಾವನೆ ಆಗುತ್ತಿತ್ತು. ಇದಕ್ಕೆ ಬ್ರಂಗ ಕೀಟ ನ್ಯಾಯವೆಂದು ಕರೆಯುತ್ತಾರೆ. ಪರಮಾತ್ಮನ ಧ್ಯಾನದಿಂದ ಪರಮಾತ್ಮನೇ ಆಗುತ್ತಾರೆ. ಶ್ರೀಗಳವರ ಇಚ್ಛೆಯಂತೆ ಆ ಸಮಯಕ್ಕೆ ಶ್ರೀಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ, ಶ್ರೀ, ೧೦೦೮ ಜಗದ್ಗುರು ಸಿದ್ಧೇಶ್ವರ ರಾಜದೇಶಿ ಕೇಂದ್ರ ಮಹಾಸ್ವಾಮಿಗಳವರು ಆಕಸ್ಮಿಕವಾಗಿ ತೆಗ್ಗಿನಮಠಕ್ಕೆ ದಯಮಾಡಿಸಿದರು.

ಉಜ್ಜಯಿನಿ ಜಗದ್ಗುರುಗಳ ದರ್ಶನವಾದ ಕೂಡಲೇ ಶ್ರೀ ಚಂದ್ರಶೇಖರ ಶಿವಾಚಾರ್ಯರು ಗುರುವಿನ ಗುರು ಪರಮರಾಧ್ಯ ಜಗದ್ಗುರುಗಳ ದರ್ಶನವಾಗಿ ಪಾವನನಾದೆ ಇನ್ನು ನನ್ನನ್ನು ಮುಕ್ತನನ್ನಾಗಿ ಮಾಡುವಿರೆಂದು ಗುರುಗಳಲ್ಲಿ ಬೇಡಿಕೊಂಡರು ಕಣ್ಣಿನ ತುಂಬಾ ಗುರುವಿನ ಚಿತ್ರ ತುಂಬಿಕೊಂಡ ಮೇಲೆ ಇನ್ನೇನು ತುಂಬಿಕೊಳ್ಳಲಿ ನಾನು ಪಾವನನಾದೆ ನನಗೆ ಅಪ್ಪಣೆ ಮಾಡಿರೆಂದು ಪ್ರಾರ್ಥಿಸಿಕೊಂಡರು ಆಗ ಜಗದ್ಗುರುಗಳು ಶ್ರೀ ಚಂದ್ರಶೇಖರ ಸ್ವಾಮಿಗಳಿಗೆ "ಭವಕ್ಕೆ ಬಂದು ಭವವನ್ನು ಗೆದ್ದವ ನೀನು ಗುಪ್ತ ಪೂಜೆ ಮಾಡಿ ಮುಕ್ತನಾದ ಗುರು ನೀನು ಎಂದು ಕೊಂಡಾಡಿ ಆಶೀರ್ವದಿಸಿದರು.

ತಮ್ಮ ಆರೋಗ್ಯ ಹದಗೆಟ್ಟಿರುವ ವಿಚಾರ ವಿವರಿಸಿದರು. ಸ್ನಾನ ಪೂಜೆಗೆ ತೊಂದರೆಯಾಗಿದ್ದರೆ ಓರ್ವ ಕ್ರಿಯಾ ಮೂರ್ತಿಯನ್ನು ನಿಮ್ಮ ಹತ್ತಿರ ಇಟ್ಟುಕೊಳ್ಳಿರೆಂದು ಅಪ್ಪಣೆ ಕೊಡಿಸಿದರು. ಅಂದು ಮಠದಲ್ಲೇ ಪೂಜೆ ಮಾಡಿ ಜಗದ್ಗುರುಗಳ ಕರುಣ ಪ್ರಸಾದವನ್ನು ಶ್ರೀಚಂದ್ರಶೇಖರ ಸ್ವಾಮಿಗಳಿಗೆ ಕರುಣಿಸಿದರು

**ಕೊನೆ ಉಸಿರು**

ಉಜ್ಜಯಿನಿ ಜಗದ್ಗುರುಗಳ ಅಪ್ಪಣೆಯಂತೆ ನಾಲ್ಕೈದು ದಿವಸ ನಡೆಯಿತು. ಅಂತ್ಯ ದಿನ ತಾವೇ ಎದ್ದು ಸ್ನಾನ ಪೂಜೆಯನ್ನು ಆನಂದವಾಗಿ ಮಾಡಿದರು ನೆರೆದ ಬಂದು ವರ್ಗದವರಿಗೂ ಭಕ್ತರಿಗೂ ಸಂತೋಷವಾಯಿತು. ಇನ್ನೂ ಗುರುಗಳು ಆರಾಮ ಆದರು ಎಂದು ಭಾವಿಸಿದರು ಆದರೆ ಆ ಸಂತೋಷ ಬಹಳ ಹೊತ್ತು ಇರಲಿಲ್ಲ. ಅದೇ ದಿನ ಸಾಯಂಕಾಲ ನೆರೆದ ಜನತೆಯನ್ನು ಕುರಿತು ಈ ದಿನ ಸ್ವಾಮಿ ದಯಮಾಡಿಸುತ್ತಾರೆ ಈ ಮಠ ಹೆಚ್ಚಿನ ಕೀರ್ತಿಯನ್ನು ಪಡೆಯುತ್ತದೆ ಎಂದರು ಇಂತಹ ದಿವಸವೇ ಲಿಂಗೈಕ್ಯರಾಗುತ್ತೇವೆ ಎಂದು ಹೇಳಿ ಅದೇ ರೀತಿ ದಯಮಾಡಿಸಿದ ಮಹಾನ್ ಗುರುಗಳ ನಾಡಿಮಿಡಿತ ಕ್ಷಿಣಿಸುತ್ತಾ ಬಂತು ಸದಾ ರೇಣುಕಾ ಎಂದು ನಾಮಸ್ಮರಣೆ ಮಾಡುವುದು ನಿಂತಿತು. ದು:ಖ ತಪ್ತ ಜನತೆಗೆ ತಮ್ಮ ಬಲ ಹಸ್ತ ಎತ್ತಿ ಮೌನವಾಗಿ ಅಂತಿಮ ಆಶೀರ್ವಾದ ಮಾಡಿ ಸರ್ವಜಿತ್ ಸಂವತ್ಸರ ವೈಶಾಖ ಶುದ್ಧ ಸಪ್ತಮಿ ದಿನಾಂಕ:೧೨.೫.೧೯೪೭ ರಂದು ಪರಶಿವನಲ್ಲಿ ಸಾಮರಸ್ಯವನ್ನು ಹೊಂದಿದರು.

ಶ್ರೀ ಚಂದ್ರಶೇಖರ ಸ್ವಾಮಿಗಳ ವಿಯೋಗದಿಂದ ತೆಗ್ಗಿನಮಠದ ಭಕ್ತ ವೃಂದಕ್ಕೆ ಅಪಾರ ಹಾನಿ ಉಂಟಾಯಿತು. ಅವರಿಗೆ ಆಗ ೫೫ ವರ್ಷ ತುಂಬಿದ್ದವು. ಲಿಂಗೈಕ್ಯರಾದ ಸುದ್ದಿ ತಲುಪುತ್ತಲೆ ಸುತ್ತಮುತ್ತಲಿನ ಗ್ರಾಮಗಳಿಂದ ಜನರು ಧಾವಿಸಿ ಬರತೊಡಗಿದರು.ಧಿವ್ಯ ಮೂರ್ತಿಯ ಕಳೆಬರಹವನ್ನು ಪೂಜಿಸಿ ಕಾಷಾಂಬರ, ರುದ್ರಾಕ್ಷಿಗಳಿಂದ ಅಲಂಕರಿಸಿ ಪುಷ್ಪ ಮಾಲೆಗಳಿಂದ ಶೃಂಗರಿಸಿ ಮೂರ್ತಗೊಳಿಸಿದರು. ಸುಮಂಗಲೆಯರು ಆರುತಿ ಬೆಳಗಿದರು ವಾದ್ಯ ಘೋಷಗಳು ಬೋರ್ಗರೆದವು. ಶೃಂಗರಿಸಲ್ಪಟ್ಟ ಪಲ್ಲಕ್ಕಿಯಲ್ಲಿ ಮೂರ್ತಗೊಳಿಸಿ ಭಜನೆ ವಾದ್ಯಗಳಿಂದ ಮುಖ್ಯ ಬೀದಿಗಳಲ್ಲಿ ಉತ್ಸವ ಮಾಡಿದರು. ಪೂಜ್ಯರ ಉತ್ತರಾಧಿಕಾರಿಯಾಗಿ ನೇಮಕವಾಗಿದ್ದ ಬಾಲಕ ಚಂದ್ರಮೌಳೀಶನನ್ನು ಕರೆದುಕೊಂಡು ಬಂದು ಲಿಂಗೈಕ್ಯ ಸ್ವಾಮಿಗಳ ಕಳೇಬರಹದ ಪಕ್ಕದಲ್ಲಿ ನಿಲ್ಲಿಸಿ ಅವರ ಪೇಟಾ ವಸ್ತ್ರ ರುದ್ರಾಕ್ಷಿಮಾಲೆ ಬೆತ್ತವನ್ನು ಪುರದ ಕಟ್ಟೀಮನಿ ಪುರವರ್ಗಮಠದ ಶ್ರೀ ಷ.ಬ್ರ. ಸಿದ್ಧವೀರ ಶಿವಾಚಾರ್ಯ ಮಹಾಸ್ವಾಮಿಗಳು ಚಂದ್ರಮೌಳೀಶನಿಗೆ ದಯಪಾಲಿಸಿ, ನೆರೆದ ಸಾವಿರಾರು ಭಕ್ತ ಜನತೆಗೆ ಇವರೇ ಮುಂದಿನ ಉತ್ತರಧಿಕಾರಿ ಎಂದು ಘೋಷಿಸಿದರು. ಬಾಗಳಿ, ಹಿರೇಮಠದ ಶ್ರೀ.ಷ.ಬ್ರ.ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯ ಸ್ವಾಮಿಗಳು ಬೆಣ್ಣಿಹಳ್ಳಿ , ದುಗ್ಗಾವತಿ ರಾಮಘಟ್ಟ, ಕೂಡ್ಲಿಗಿ ಗ್ರಾಮಗಳಿಂದ ಬಂದಿದ್ದ ಪಟ್ಟಾಧ್ಯಕ್ಷರುಗಳ ಸಮ್ಮುಖದಲ್ಲಿ ಶಾಸ್ತ್ರೋಕ್ತವಾಗಿ ಶ್ರೀಗಳವರ ಕ್ರಿಯಾ ಸಮಾಧಿಯಾಯಿತು.

## ಅಧ್ಯಾಯ ನಾಲ್ಕು

# ಮಠದ ಸನ್ಯಾಸತ್ವ ಸ್ವೀಕರಿಸಿದ ಮಹಾಂತರು

ಶ್ರೀ ಚಂದ್ರಮೌಳೀಶ್ವರ ಶಿವಾಚಾರ್ಯರು ಜನನವಾದದ್ದು ೧೯೩೭ ರಲ್ಲಿ ತಂದೆ ಶ್ರೀಶಿವಶಂಕ್ರಯ್ಯ ಹಿರೇಮಠ. ತಾಯಿ ಶ್ರೀಮತಿ ಸಿದ್ಧಮ್ಮ. ವೀರಶೈವಮತದ ಸಂಪನ್ನರಾದ ಇವರು ಅತ್ಯಂತ ಸಾತ್ವಿಕ ದಂಪತಿಗಳು ತ್ರಿಕಾಲ ಪೂಜಾನುಷ್ಠಾನಗಳನ್ನು ನಡೆಸಿಕೊಂಡು ಹೋಗುತ್ತಿದ್ದ ಅವರನ್ನು ಭಕ್ತರು ಜಂಗಮ ಯತಿಗಳೆಂದೇ ಗೌರವಿಸುತ್ತಿದ್ದರು. ಅವರ ಬಾಲ್ಯವು ಕಳೆಯಿತು. ಬಾಲ್ಯದಲ್ಲಿ ತಂದೆ ತಾಯಿಗಳ ಸನ್ನಡತೆಯ ಹೆದ್ದಾರಿಯಲ್ಲಿ ಅತ್ಯಂತ ಸಾತ್ವಿಕರಾಗಿ ಶ್ರೀಗಳವರು ಬೆಳೆದು ಬಂದರು. ಶೈಶವದಲ್ಲಿ ವರ್ಚಸ್ವಿಯಾಗಿದ್ದ ಅವರ ಮುಖಾರವಿಂದ ಭಕ್ತಿಸಂಪನ್ನವಾಗಿತ್ತು. ಶರಣನ ಸಾಧಕತನ ಎದ್ದು ಕಾಣುತ್ತಿತ್ತು. ಸಾಕ್ಷಾತ್ ಪರಮಶಿವನು ಜಂಗಮ ರೂಪದಿಂದ ಧರೆಗೆ ಬಂದಿಳಿದಿದ್ದಾನೆಂದು ಭಕ್ತರು ಭಾವಿಸಿದ್ದರು. ದಾಸೋಹ ಮತ್ತು ಪೂಜಾ ಕೈಂಕರ್ಯಗಳಲ್ಲಿ ಬಾಲ್ಯದಲ್ಲಿಯೇ ತನ್ನ ತಂದೆ ತಾಯಿಗಳ ಜೊತೆ ಸಹಕರಿಸುತ್ತಿದ್ದುದು ಸೋಜಿಗದ ಸಂಗತಿಯಾಗಿತ್ತು. ಬಾಲ್ಯದ ಮನೋಭಾವ ಸನ್ಯಾಸತ್ವದ ಕಡೆಗೆ ತುಡಿಯುತ್ತಿತ್ತು.

**ಕೃಷಿ ಚಟುವಟಿಕೆಯಲ್ಲಿ ಮಠವನ್ನು ನೆನೆಯುವುದು**

ಹರ-ಗುರು-ಚರಮೂರ್ತಿಗಳ ಧರ್ಮಬಾಹುಳ್ಯದ ಕಾರ್ಯಗಳು ಅವರ ಮೇಲೆ ಹೆಚ್ಚು ಪ್ರಭಾವ ಬೀರಿದ್ದವು. ಶರಣ ಪಥದ ಹೆದ್ದಾರಿ ಅವರ ಮುಂದೆ ಎದ್ದು ಕಾಣುತ್ತಿತ್ತು. ಮಾತೆತ್ತಿದರೆ ಶರಣರ ಅನುಭಾವದ ನುಡಿಗಣ ಪ್ರಕಟಗೊಳ್ಳುತ್ತಿತ್ತು. ನಡೆಯಲ್ಲಿ ಸದ್ವಿನಯತೆ ನುಡಿಯಲ್ಲಿ ಸೌಮ್ಯತೆ ನೋಡಿದಷ್ಟಕ್ಕೆ ಆಪ್ತೇಷ್ಠರಾಗುವ ಅವರ ಮುದ್ದು ಭಕ್ತರಿಗೆ ಇಷ್ಟವಾಗುತ್ತಿತ್ತು. ಭಕ್ತರು ಒಕ್ಕಲಿಗ ಕಣದಲ್ಲಿ ಹಂತಿ ಪ್ರಾರಂಭಿಸುವಾಗ ಮೇಲೆ ಬಸವಣ್ಣನ ಪೂಜೆ ಮಾಡಿ ಎತ್ತುಗಳನ್ನು ತೆನೆರಾಶಿಯಲ್ಲಿ ಹೋಗಿಸಿ ಪದಗಳನ್ನು ಹಾಡಲು ಪ್ರಾರಂಭಿಸುತ್ತಾರೆ. ತಮ್ಮ (ಇಷ್ಟ) ಮನೆದೇವರನ್ನು ಮೊದಲು ನೆನೆಯುತ್ತಾರೆ. ಪ್ರತಿಯೊಬ್ಬ ಒಕ್ಕಲಿಗನು ಸ್ವಾಮಿಗಳನ್ನು ಪೂಜ್ಯಭಾವದಿಂದ ಕಾಣುತ್ತಾರೆ. ಅಂತೆಯೇ ಕಣದಲ್ಲಿ ಹಂತಿಕಟ್ಟಿದಾಗ ಸರ್ವರೂ ಮತಾತೀತರಾಗಿ ಪೂಜ್ಯ ಶ್ರೀಗಳನ್ನು ನೆನೆಯುತ್ತಾರೆ.

"ಮಠವೆಲ್ಲಿ ಮಠವೆಲ್ಲಿ ಮಠದ ಬಾಗಿಲವೆಲ್ಲಿ
ಕಟ್ಟಿದ ರುದ್ರಾಕ್ಷಿ ಕದವೆಲ್ಲಿ
ಕಟ್ಟಿದ ರುದ್ರಾಕ್ಷಿ ಕದವೆಲ್ಲಿ ತೆಗ್ಗಿನಮಠದಸ್ವಾಮಿ
ಮಠವೈತೋ ಹರಪುರ ಮಧ್ಯದಾಗ ! ಹೂ ಹೊಲ್ಯಾಣ"

ಎಂದು ಮನದುಂಬಿ ಮಠದ ಶಿವಾಚಾರ್ಯರನ್ನು ನೆನೆಯುತ್ತಾರೆ. ಆದುದರಿಂದ ಇವರನ್ನು ಬಾಲ್ಯದಲ್ಲಿಯೇ ಭಕ್ತರು ಇವರಲ್ಲಿರುವ ಅಲೌಕಿಕ ಶಕ್ತಿಯನ್ನು ಅರಿತು ಪೂಜ್ಯ ಭಾವನೆಯಿಂದ ನಡೆದುಕೊಳ್ಳುತ್ತಿದ್ದರು. ಜಂಗಮ ವಟುವಾಗಿ ಬೆಳೆದ ಶ್ರೀಗಳವರು ಸಾಮಾಜಿಕ ಜವಬ್ದಾರಿಯನ್ನು ಬಹು ಬೇಗ ಅರ್ಥಮಾಡಿಕೊಂಡರು. ಪ್ರತಿಯೊಂದು ಧಾರ್ಮಿಕ ಕ್ರೀಯಾಚಾರಗಳಲ್ಲೂ ತುಂಬಾ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದರು. ಪೂಜ್ಯರು ಚಿಕ್ಕವರಿರುವಾಗಲೇ ತಾಯಿಯನ್ನು ಕಳೆದುಕೊಂಡು ಅಜ್ಜಿಯ ಆಶ್ರಯದಲ್ಲಿ ಬೆಳೆಯುತ್ತಾ ಚಿಕ್ಕವರಿರುವಾಗಲೇ ಸಮಾಜದ ಉದ್ಧಾರಕ್ಕಾಗಿ ಶ್ರಮಿಸಿದ್ದಾರೆ. ೧೯೬೧-೬೨ ರಲ್ಲಿ ನಾಗತಿಬಸಾಪುರದ ವಿದ್ಯಾವಂತ ತರುಣರೆಲ್ಲರೂ ಸೇರಿ "ಗ್ರಾಮ ಸೇವಾ ಸಂಘ" ವನ್ನು ಸ್ಥಾಪಿಸಿ ಗ್ರಾಮದ ಉದ್ದಾರಕ್ಕಾಗಿ ನಾಂದಿ ಹಾಡಿದರು ಯಾವ ಸಮಯದಲ್ಲಿ ಯಾವುದೇ ಕೆಲಸ ನಡೆಯಬೇಕೆಂದರೂ ಹಣ ಮುಖ್ಯವಾಗಿ ಬೇಕಾಗುತ್ತದೆ. ಹಣ ಸಂಗ್ರಹಕ್ಕಾಗಿ ಒಂದು ನಾಟಕವನ್ನು ಸಹ ಪ್ರದರ್ಶಿಸಿ ಹಣ ಸಂಗ್ರಹ ಮಾಡಿದರು "ದಸರಾ" ಎಂಬ ನಾಟಕ ಪ್ರದರ್ಶಿಸುವುದರ ಮೂಲಕ ಈ ನಾಟಕದಲ್ಲಿ ಶ್ರೀಗಳು ಸ್ತ್ರೀ ಪಾತ್ರವಾದ 'ಮಲ್ಲಿ' ಎಂಬ ಹಾಸ್ಯ ಪಾತ್ರ ಮಾಡಿ ಜನರನ್ನು ಮೆಚ್ಚಿಸಿದರು. ಇವರ ಅಜ್ಜಿ ಸ್ವಾಮಿಯಾಗಲಿರುವ ಶ್ರೀಗಳವರಿಗೆ ಹೆಣ್ಣು ಪಾತ್ರ ಮಾಡಲು ಸೀರೆ ಉಟ್ಟುಕೊಳ್ಳಲು ವಿರೋದಿಸಿದರು. ಆದರೆ ಪಾತ್ರ ಮಾಡಿರುವ ಶ್ರೀಗಳ ಗೆಳೆಯರೆಲ್ಲರೂಸೇರಿ ಅಜ್ಜಿಯ ಕಾಲನ್ನು ಹಿಡಿದು ಕಾಡಿ ಬೇಡಿ ಮನವೊಲಿಸಿಕೊಂಡು ಪರವಾನಿಗೆ ಪಡೆದು ಎರಡು ಸಲ ನಾಟಕ ಪ್ರದರ್ಶನ ಮಾಡಿ ಬಂದ ಹಣದಿಂದ ಗ್ರಾಮದ ಅಭಿವೃದ್ಧಿಕಾರ್ಯಗಳನ್ನು ಮಾಡಿದರು. ಹೀಗೆ ಬಾಲ್ಯದಿಂದಲೇ ಸಾಮಾಜಿಕ ಕಳ ಕಳಿ ಶ್ರೀಗಳವರಲ್ಲಿ ಕಂಡುಬರುತ್ತದೆ.

"ಬೆಳೆಯುವ ಸಿರಿ ಮೊಳಕೆಯಲ್ಲಿ" ಎನ್ನುವಂತೆ ಬಾಲ್ಯದಲ್ಲಿಯೇ ಅನೇಕ ಪವಾಡ ಸದೃಶ್ಯ ಘಟನೆಗಳನ್ನು ಅವರಿಂದ ಜರುಗಿದವು. ಆದರೆ ಇತ್ತ ಕಡೆ ತಾಯಿಯನ್ನು ಕಳೆದುಕೊಂಡು ಮಾತೃವಾತ್ಸಲ್ಯದಿಂದ ವಂಚಿತರಾದರು ಆಗ ಬಾಲ್ಯದಲ್ಲಿ ಶ್ರೀಗಳನ್ನು ಕಂಡ ಜನಪದ ಗರತಿಯರು ಹೀಗೆ ಹೇಳಿದ್ದಾರೆ.

> "ಕಾವಿಯ ಉಟ್ಟಾನ ಕಮಂಡಲ ಧರಿಸ್ಯಾನ
> ಹಳೆಯ ಮಠದಾಗ ಮಲಗ್ಯಾನ ! ಸ್ವಾಮಿ
> ತಾಯಿದ್ದರೇಟು ಮರುಗ್ಯಾಳ""

ಹುಟ್ಟಿನಿಂದಲೇ ತಾಯಿಯನ್ನು ಕಳೆದುಕೊಂಡಿದ್ದ ಚಂದ್ರಮೌಳೇಶ್ವರರನ್ನು ಕುರಿತು ಜನಪದರ ಆಶುಕವಿತ್ವಶಕ್ತಿ ಹೊಂದಿದ ತ್ರಿಪದಿಯಾಗಿದೆ. ಜನಪದರು ನೋಡಿದ್ದು, ಮಾಡುವ ಕೇಳಿದ್ದು ನೆನಪಿಡುವ ಮತ್ತು ಹಾಡುವ ಕೆಲಸ ಮಾಡುತ್ತಿದ್ದರೆನ್ನುವುದಕ್ಕೆ ಸಾಕ್ಷಿ ಈ ತ್ರಿಪದಿ.

ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ಬಂದು ಇಲ್ಲ ಎನ್ನುವ ಗಾದೆಯಂತೆ ತಾಯಿ ಮಗು ದಿನೇ ದಿನೇ ಬೆಳೆಯುವುದನ್ನು ನೋಡಿ ತಾಯಿ ಇದ್ದರೆ ಎಷ್ಟೊಂದು ಸಂತೋಷ ಪಡುತ್ತಿದ್ದಳೋ ಅಥವಾ ತಾಯಿಯ ಪ್ರೋತ್ಸಾಹದಿಂದಲೇ ಸಾಧನೆ ಇನ್ನೂ ಅತ್ಯೂತ್ತಮವಾಗುತ್ತಿತ್ತು. ಎನ್ನಬಹುದಾಗಿದೆ. "ಮರಾಣ-

ಪ್ರವಚನ, ಧಾರ್ಮಿಕ ಸಭೆ-ಸಮಾರಂಭಗಳು ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಎಲ್ಲೇ ನಡೆಯಲಿ ಅಮಿತೋತ್ಸಾಹದಿಂದ ಭಾಗವಹಿಸುತ್ತಿದ್ದರು. ಅವರಲ್ಲಿದ್ದ ಅಲೌಕಿಕ ಅಪೇಕ್ಷೆಗಳು ಬಡವ, ದಲಿತ, ಹಿಂದುಳಿದವರನ್ನು ಮೇಲೆತ್ತುವ ಸಾಮಾಜಿಕ ಹೊಣೆಗಾರಿಕೆ ಅವರನ್ನು ಧರ್ಮಕಾರಣದ ಮುಖ್ಯವಾಹಿನಿಗೆ ಕರೆತಂದವು. ಬಾಲ್ಯ ಜೀವನವನ್ನು ನಾಗತಿಬಸಾಪುರದಲ್ಲಿ ಕಳೆಯುತ್ತಾ ಅಲ್ಲಿಯೆ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡರು. ಇವರ ಊರಲ್ಲಿ ತೆಗ್ಗಿನಮಠದ ಶಾಖಾ ಮಠವಿದೆ ಆ ಮಠವನ್ನು ಮತ್ತು ಸ್ವಾಮಿಗಳನ್ನು ಕುರಿತು ಹೀಗೆ ವ್ಯಕ್ತಪಡಿಸಿದ್ದಾರೆ.

ತೆಗ್ಗಿನಮಠದ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯರ ವಂಶಸ್ಥರಾದ ಗಿರಿರಾಜ ಹಾಲಸ್ವಾಮಿಗಳು ನಾಗತಿಬಸಾಪುರ ಧರ್ಮಪ್ರಚಾರ ಕಾರ್ಯದಲ್ಲಿ ಪ್ರವೃತ್ತರಾಗಿದ್ದಾರೆ. ನಾಗತಿಬಸಾಪುರದಲ್ಲಿ ವರ್ಷಕ್ಕೆ ಒಂದು ಬಾರಿ ಮುಳ್ಳುಗದ್ದಿಗೆ ಪವಾಡ ಹಾಗೂ ಸಾಮೂಹಿಕ ವಿವಾಹಗಳನ್ನು ನೆರವೇರಿಸುತ್ತಾ ಜನರ ಎಲ್ಲಾ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸಲೆಂದೇ ಈ ಮಠ ಅವತರಿಸಿದೆ ಎಂದು ಹೇಳಬಹುದು. ಈ ಮಠದ ಬಗ್ಗೆ ಜನರಿಗೆ ಅಪಾರವಾದ ನಂಬಿಕೆ ವಿಶ್ವಾಸ ಇದೆ. ಇವರನ್ನು ದೇವರೆಂದು ತಿಳಿದು ಪೂಜಿಸುತ್ತಾ ಜೀವನ ನಡೆಸುತ್ತಿದ್ದಾರೆ. ಎಷ್ಟೇ ಕಷ್ಟ ತೊಂದರೆ ಬಂದರೂ ಗುರುವಿನ ಸೇವೆ ಮಾಡುತ್ತಾ ಜೀವನ ನಡೆಸುತ್ತಾನೆ. ಎಂದು ಹೇಳಿದ್ದಾರೆ. ನಾಗತಿಬಸಾಪುರದ ಜನತೆ ಮಠವನ್ನು ಕುರಿತು ಹೀಗೆ ವ್ಯಕ್ತಪಡಿಸುತ್ತಾರೆ. ಜಾನಪದದಲ್ಲಿ ಮುಳ್ಳುಗದ್ದಿಗೆ ಏರುವ ಸಂದರ್ಭದಲ್ಲಿ ಹೀಗೆ ಹೇಳುತ್ತಾರೆ.

"ಸ್ವಾಮಿ ಬಂದಾನೋ
ಸದರ ಏರಿದನೋ
ನೀಲ ಹೊತ್ತಿಗಿ ಹಿಡಿದಾನ
ರಾಂಪುರದ ಸ್ವಾಮಿ ಬಂದಾನ"

ನೀಲಹೊತ್ತಿಗೆ ಎನ್ನುವುದುಜನಪದರಲ್ಲಿ ತುಂಬಾ ಭಯಾನಕವಾದುದು, ಅದು ಭವಿಷ್ಯದ ಸತ್ಯವನ್ನೇ ಹೇಳುತ್ತದೆ. ಎಂಬ ನಂಬಿಕೆ ಇದೆ. 'ನೀಲ' ನೀಲಕಂಠನಿಂದ ಬಂದದ್ದು, ಶಿವನಶಾಸ್ತ್ರೋಕ್ತ ಭವಿಷ್ಯದ ಪುಸ್ತಕವಾಗಿದೆ. ಅಂತಹವರನ್ನು ಸ್ವಾಮಿ ತಂದಿದ್ದಾನೆಂದು ಶಿವನ ಪರ್ಯಾಯ ರೂಪ ಸ್ವಾಮಿಯೆಂದು ತಿಳಿಯುವ ಸಂಗತಿಯಲ್ಲಿ ವ್ಯಕ್ತವಾಗಿದೆ.

ಇವರ ಮೂಲ ರಾಂಪುರವಾಗಿರುವುದರಿಂದ ಬರುವ ಸಂದರ್ಭದಲ್ಲಿ ಹೀಗೆ ಮುಳ್ಳು ಗದ್ದುಗೆ ಹೇರುವ ಮುನ್ನ ಗರತಿಯರು ಜನಪದ ತ್ರಿಪದಿಯನ್ನು ವ್ಯಕ್ತಪಡಿಸಿದ್ದಾರೆ.

"ತೆಗ್ಗಿನಾಗ ಹುಟ್ಟೋದು ತೆಗ್ಗಿನಾಗ ಬೆಳೆಯೋದು
ಗಗನಾಕ ಬಾಯಿ ಬಿಡುವೋದು! ಹಾಲಸ್ವಾಮಿ
ಮುಳ್ಳು ಸದರಿಗೆ ತರಬೇಕು"

ಮುಳ್ಳೇನ ಸದರಿಗೆ ತರಬೇಕು ಹಾಲಸ್ವಾಮಿ
ಮುಳ್ಳು ಪವಾಡ ಕಟ್ಟಬೇಕು !
ದೇವಣ್ಣ ಮನೆಯ ಐದು ಮಂದಿ ಮುತ್ಯೆದೆಯರನ್ನ ಕರಿಸ್ಯಾನ"

"ಹಾಲಸ್ವಾಮಿ ಮುಳ್ಳ ಪವಾಡ ಕಟ್ಟಿಸ್ಯಾನ
ದೇವಣ್ಣ ಮನಿನಾಕ ತೆಂಗಿನಕಾಯಿ!
ನಾಕ ಮೂಲಿಗೆ ನಾಕ ಕಟ್ಟಿಸ್ಯಾನ ಹಾಲಸ್ವಾಮಿ ಮುಳ್ಳು ಬರುತ್ತಾನೆ"

ಹೀಗೆ ಮಠವನ್ನು ಕುರಿತು ಹಲವಾರು ಜನಪದ ಹಾಡುಗಳನ್ನು ವ್ಯಕ್ತಪಡಿಸುತ್ತಾ ತಮ್ಮ ನೋವುಗಳನ್ನು ಮರೆತು ಜೀವನ ನಡೆಸುತ್ತಿದ್ದರು.

ಹೀಗೆಯೆ "ನಾಗತಿಬಸಾಪುರದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದುಕೊಂಡರು ಅಲ್ಲಿ ಅವರಿಗೆ ದೊರೆತದ್ದು ಲೌಕಿಕ ಶಿಕ್ಷಣ ಮಾತ್ರ ತಂದೆ ತಾಯಿಗಳು ಚಂದ್ರಮೌಳೀಶ್ವರರಿಗೆ ಮನೆಯಲ್ಲಿ ಹೇಳಿಕೊಡುತ್ತಿದ್ದ ಲೌಕಿಕ ಶಿಕ್ಷಣ ಸಾಲದೆನಿಸಿತು. ಅದರ ಜೊತೆಗೆ ಅಲೌಕಿಕ ಶಿಕ್ಷಣವು ಅಗತ್ಯವೆನಿಸಿತು. ಒಂದು ಆಧ್ಯಾತ್ಮಿಕ ಪರಿಸರ ಅವರಿಗೆ ಅನಿವಾರ್ಯವೆನಿಸಿತು. ಅದಕ್ಕಾಗಿ ಶೋಧನೆ ಆರಂಭಿಸಿದರು. ಪುರ ಪ್ರಮುಖರು ತಂದೆ ತಾಯಿಗಳು ಒಂದು ಆಧ್ಯಾತ್ಮಿಕ ಪರಿಸರವನ್ನು ಒದಗಿಸಿಕೊಡಲು ಮುಂದಾದರು. ಅಲ್ಲಲ್ಲಿ ಧಾರ್ಮಿಕ ಕೇಂದ್ರಗಳನ್ನು ತಡಕಾಡಿದರು. ಆದರೆ ಬಾಲಕ ಶ್ರೀ ಚಂದ್ರಮೌಳೀಶ್ವರರಿಗೆ ಯಾವ ವಾತಾವರಣವು ಸೂಕ್ತವಾಗಿ ಕಾಣಲಿಲ. ಇವರ ಪ್ರೌಢ ಶಿಕ್ಷಣ ಎಲ್ಲಿ ಮುಂದುವರೆಸಬೇಕು ಅದಕ್ಕೆ ಸೂಕ್ತ ವಾತಾವರಣ ಎಲ್ಲಿರುವುದೋ ಎಂದು ಚಿಂತಿತರಾಗಿದ್ದಾಗ ಹರಪನಹಳ್ಳಿಯ ಶ್ರೀಪೂಜ್ಯಚಂದ್ರಶೇಖರಶಿವಾಚಾರ್ಯ ಸ್ವಾಮಿಗಳವರ ಕೃಪಾದೃಷ್ಠಿ ಇವರ ಮೇಲೆ ಬಿದ್ದಿತು. ಮುಂದೆ ಈ ಬಾಲಕನೊಬ್ಬ ಕರ್ತೃನಾಗಬಲ್ಲ ಸಾಮಾಜಿಕ, ಶೈಕ್ಷಣಿಕ, ಹೊಣೆಗಾರಿಕೆಯನ್ನು ಹೊತ್ತೊಯ್ಯಬಲ್ಲ ಎಲ್ಲಾ ಲಕ್ಷಣಗಳು ಇವನಲ್ಲಿವೆ. ಎಂಬುದನ್ನು ಅವರು ತಮ್ಮ ಅಲೌಕಿಕ ದೃಷ್ಠಿಯಿಂದ ಕಂಡುಕೊಂಡಿದ್ದರು. ಹಾಗೆಯೇ ಬಾಲಕ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯರು ಹರಪನಹಳ್ಳಿಯತ್ತ ಲೌಕಿಕ ಮತ್ತು ಅಲೌಕಿಕ ವಿದ್ಯಗಳನ್ನರಸಿಕೊಂಡು ಶ್ರೀ ಮಠಕ್ಕೆ ಬಂದರು ವಿದ್ಯಾರ್ಥಿಯಾಗಿದ್ದಾಗಲೇ ಅವರ ಕರ್ತೃತ್ವ ಶಕ್ತಿ ಎದ್ದು ಕಾಣುತ್ತಿತ್ತು. ಅಲ್ಲಿದ್ದ ಸಹವರ್ತಿಗಳೆಲ್ಲರೂ ಬೆರಗಾಗುವಂತೆ ಸಂಘಟನೆ ಸಾಮಾಜಿಕ ಹೊಣೆಗಾರಿಕೆಗಳ ಬಗೆಗೆ ಮಾತನಾಡುತ್ತಿದ್ದರು. ಅನ್ಯರ ವಚನಗಳನ್ನು ಶಿಸ್ತು ಬದ್ಧವಾಗಿ ಅಧ್ಯಯನ ಮಾಡಿದರು. ವೀರಶೈವ ಧರ್ಮದ ತಾತ್ವಿಕ ಪ್ರಣಾಳಿಕೆಗಳಾದ ಅಷ್ಠಾವರ್ಣಗಳು, ಪಂಚಾಚಾರಗಳು, ಹಾಗೂ ಷಟಸ್ಥಳಗಳ ಬಗೆಗೆ ವೈಜ್ಞಾನಿಕ ಅಧ್ಯಯನ ನಡೆಸಿದರು. ಸಿದ್ಧಾಂತ ಶಿಖಾಮಣಿ ಶೂನ್ಯ ಸಂಪಾದನೆ ಆಧ್ಯರ ವಚನಗಳು ವೀರಶೈವ ಪುರಾಣಗಳಲ್ಲಿನ ಸಾರ ಸರ್ವಸ್ವಗಳನ್ನು ಅಧ್ಯಯನ ಮಾಡಿದರು. ಆ ಸಂದರ್ಭದಲ್ಲಿ ಮಠದಲ್ಲಿ ನೆರವೇರುತ್ತಿದ್ದ ಧಾರ್ಮಿಕ ಸಮಾರಂಭಗಳು ಅವರನ್ನು ಪೂರ್ಣ ಪ್ರಮಾಣದ ಷಟಸ್ಥಳ ಬ್ರಹ್ಮ ಪದವಿಗಗೆ ಅರ್ಹನಾಗುವ ರೀತಿಯಲ್ಲಿ ಅವರನ್ನು ಸನ್ನದ್ಧಗೊಳಿಸಿದವು. ಅವರ ಚಟುವಟಿಕೆಗಳೆಲ್ಲವನ್ನು ಕಂಡ ಪೂಜ್ಯ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯ ಸ್ವಾಮಿಗಳವರಿಗೆ ತಮ್ಮ ಉತ್ತರಾಧಿಕಾರಿ ಗಳನ್ನಾಗಿಸಿಕೊಳ್ಳಬೇಕೆಂಬ ಬಯಕೆ ನೂರ್ಮಡಿಯಾಯಿತು.

ಪೂಜ್ಯ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯ ಸ್ವಾಮಿಗಳವರು ಮಾಧ್ಯಮಿಕ ಶಿಕ್ಷಣವನ್ನು ಪೂರೈಸಿ ಉನ್ನತ ವ್ಯಾಸಂಗಕ್ಕಾಗಿ ಮೈಸೂರನ್ನು ಸೇರಿಕೊಂಡರು. ಅವರ ದಾರ್ಶನಿಕ ಆಲೋಚನೆಗಳು ಲೌಕಿಕ

ಶಿಕ್ಷಣವನ್ನು ಮಾಧ್ಯಮವನ್ನಾಗಿರಿಸಿಕೊಂಡು ಬೆಳೆಯತೊಡಗಿದರು. ಮೈಸೂರಿನ ಯುವರಾಜ ಕಾಲೇಜಿನಲ್ಲಿ ತಮ್ಮ ಇಂಟರ್ಮಿಡಿಯೇಟ್ ಶಿಕ್ಷಣವನ್ನು ಪೂರೈಸಿದರು. ಆ ನಂತರ ಮೈಸೂರಿನ ಬನುಮಯ್ಯ ಕಾಲೇಜಿನಲ್ಲಿ ಪದವಿಯನ್ನು ಪೂರೈಸಿದರು.ಪದವಿ ತರಗತಿಗಳಲ್ಲಿ ಅಧ್ಯಯನ ಮಾಡುವಾಗ ಭಾರತೀಯರ ಷಟ್‌ದರ್ಶನಗಳ ಬಗೆಗೆ ಅವರಿಗೆ ಆಸಕ್ತಿ ಹುಟ್ಟಿತು ಭಗವದ್ಗೀತೆಯ ಬಗೆಗೆ ಇದ್ದ ಅವರ ಗ್ರಹಿಕೆಗಳು ಬದಲಾದವು.ಶಿವಾಗಮಗಳು ವೀರಾಗಮಗಳ ಬಗೆಗೆ ಜ, ಚ, ನಿ, ಯವರ ಒಳಹುಗಳನ್ನು ಬಹುವಾಗಿ ಮೆಚ್ಚಿಕೊಂಡರು ಶ್ರೀ ಟಿ.ಜಿ. ಸಿದ್ದಪ್ಪಾರಾಧ್ಯರ ಶ್ರೀಕರಭಾಷ ಶಂಕರ ಭಾಷೆಗಳು ಅವರ ಆಧ್ಯಾತ್ಮಿಕ ಆಸಕ್ತಿಯನ್ನು ಹೆಚ್ಚಿಸಿದವು. ಶ್ರೀ ಟಿ.ಎನ್.ಮಲ್ಲಪ್ಪನವರು ಅದು ವೀರಶೈವ ಧರ್ಮದ ಬಗೆಗೆ ನಡೆಸಿದ ಸಂಶೋಧನೆಗಳಿಂದ ಪ್ರಭಾವಿತರಾದರು. ಅವರ ಅಧ್ಯಯನ ವಿಸ್ತಾರಗೊಂಡಿತು. ಸಾಂಪ್ರದಾಯಿಕ ಶಿಕ್ಷಣ ಅವರ ಆಸಕ್ತಿಯನ್ನು ಅಧ್ಯಯನ ಕ್ಷೇತ್ರವಾಗಿದ್ದರೆ ಅವರು ಸಂಸ್ಕೃತದಲ್ಲಿ ಸ್ನಾತಕೋತ್ತರ ಪದವಿಯನ್ನು ಮಾಡುತ್ತಿದ್ದರು. ಆದರೆ ಅವರಿಗೆ ಅದು ಬೇಕಾಗಿರಲಿಲ್ಲ ಭಾರತದ ದರ್ಶನಗಳಾಚೆಗೆ ಜ್ಞಾನಶಿಸ್ತುಗಳಾಚೆಗೆ ಜಾಗತಿಕ ದರ್ಶನಗಳನ್ನು ಅಧ್ಯಯನ ಮಾಡುವ ತೀವ್ರ ಕುತೂಹಲ ಅವರಿಗೆ ಉಂಟಾಯಿತು. ಭೌತಿಕವಾದ ಅದಿಭೌತಿಕ ಆಧ್ಯಾತ್ಮಿಕವಾದಗಳು ಜಾಗತಿಕ ನೆಲೆಯಲ್ಲಿ ಹೇಗೆ ಪ್ರಕಟಗೊಂಡಿವೆ ಎಂಬ ಕುತೂಹಲಕರ ವಿಷಯಗಳ ಕಡೆಗೆ ಬಿಂಬಿಸುತ್ತಿದ್ದರು. ಆಗ ಅವರಿಗೆ ಶೈಕ್ಷಣಿಕ ಶಿಸ್ತಿನ ಮೂಲಕ ಅಧ್ಯಯನವನ್ನು ನಡೆಸುವ ಏಕಮೇವ ದಾರಿಯೆಂದರೆ ತತ್ವಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆಯುವುದಾಗಿತ್ತು. ಅದರಂತೆ ಅವರು ೧೯೬೫ ರಲ್ಲಿ ತತ್ವಶಾಸ್ತ್ರದಲ್ಲಿ ಕರ್ನಾಟಕದ ವಿಶ್ವವಿದ್ಯಾನಿಲಯದಿಂದ ಉನ್ನತ ದರ್ಜೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡರು.

ಹೀಗೆಯೆ ಅಲ್ಲಿಂದ ಅವರು ಸಂಸ್ಕೃತ ಭಾಷೆಯಲ್ಲಿಯ ಶಾಸ್ತ್ರಜ್ಞಾನವನ್ನು ತಿಳಿದುಕೊಳ್ಳಲು ಮೈಸೂರಿನ ಸುತ್ತೂರು ಮಠದಲ್ಲಿ ಉಳಿದರು ಅಲ್ಲಿ ತಂಗಿದ್ದ ಹರ-ಗುರು-ಚರಮೂರ್ತಿಗಳೊಂದಿಗೆ ಶಿವಾಗಮಗಳು ವೀರಾಗಮಗಳು ಅವು ಚರಿತ್ರೆಯಲ್ಲಿ ವಹಿಸಿದ ಪಾತ್ರಗಳು ಮುಂತಾದವುಗಳ ಬಗೆಗೆ ವಿಶೇಷವಾಗಿ ಅಧ್ಯಯನ ಮಾಡಿದರು. ಭವಿಷ್ಯದ ಆಧ್ಯಾತ್ಮಿಕ ಶಿಕ್ಷಣ ಹೇಗಿರಬೇಕು ಅದರ ಪ್ರಸಾರ ಹೇಗೆ ಶೈಕ್ಷಣಿಕ ಸಂಸ್ಥೆಗಳ ಮೂಲಕ ಅದು ಸಾದ್ಯವೆ ? ಮುಂತಾದ ಉನ್ನತ ಆಲೋಚನೆಗಳ ಮೂಲಕ ಹರಪನಹಳ್ಳಿಗೆ ವಾಪಸಾದರು ಇಲ್ಲಿಂದ ಅವರ ಕರ್ತೃತ್ವ ಶಕ್ತಿ ಸ್ಫೋಟಗೊಂಡಿತು.

ಅವರ ಶೈಕ್ಷಣಿಕ ಪದವಿಗಳು ಉನ್ನತವಾಗಿದ್ದುದರಿಂದ ಕರ್ನಾಟಕ ರಾಜ್ಯದ ಹಲವಾರು ಕಾಲೇಜು, ವಿಶ್ವವಿದ್ಯಾಲಯಗಳು ಅವರನ್ನು ಬೋಧಕ ಹುದ್ದೆಗೆ ಆಹ್ವಾನಿಸಿದವು ತತ್ವಶಾಸ್ತ್ರದ ಬೋಧನೆ ಆ ಸಂದರ್ಭದಲ್ಲಿ ಅತ್ಯಂತ ಸಂಕೀರ್ಣವಾಗಿತ್ತು. ಕರ್ನಾಟಕದಲ್ಲಿ ತತ್ವಶಾಸ್ತ್ರ ಚಿಂತನೆಗೆ ಒಂದು ವೇದಿಕೆಗಳಲ್ಲಿ ಅಥವಾ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಪೀಠಗಳಾಗಲಿ ಸಶಕ್ತವಾಗಿ ಹುಟ್ಟಿಕೊಂಡಿರಲಿಲ್ಲ ಈ ಕಾರಣಕ್ಕಾಗಿ ಅಂದು ತತ್ವಶಾಸ್ತ್ರ ಆಶಿಸ್ತಿನ ಜಿಜ್ಞಾಸೆಗಳಿಗೆ ಲಭ್ಯವಾಗದೇ ಹೋಗಿತ್ತು. ಇಂತಹ ಸಂದರ್ಭದಲ್ಲಿ ಕಲಬುರ್ಗಿಯ ಶ್ರೀ ಶರಣಬಸಪ್ಪ ಅಪ್ಪ ಇವರನ್ನು ಆಹ್ವಾನಿಸಿ ಶ್ರೀ ಶರಣಬಸವೇಶ್ವರ ಕಾಲೇಜು,

ಗುಲ್ಬರ್ಗಾದಲ್ಲಿ ಉಪನ್ಯಾಸಕ ಹುದ್ದೆಯನ್ನು ನೀಡುವುದರ ಜೊತೆಗೆ ವಿಭಾಗದ ಮುಖ್ಯಸ್ಥರನ್ನಾಗಿಸಿದರು. ೧೯೭೫ರಲ್ಲಿ ತತ್ವಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಗಮನಾರ್ಹ ಕೆಲಸವನ್ನು ಮಾಡಿದರು. ಇವರ ಅಧ್ಯಯನ ಶೀಲ ವ್ಯಕ್ತಿತ್ವ ಮತ್ತು ನಿರಂತರ ಚಟುವಟಿಕೆಯಿಂದ ಕೂಡಿದ ಕಾರ್ಯವೈಖರಿಗಳು ಪೂಜ್ಯ ಶ್ರೀ ಶರಣಬಸಪ್ಪ ಅಪ್ಪಗಳವರ ಗಮನಸೆಳೆದವು. ಪೂಜ್ಯ ಶ್ರೀ ಶರಣ ಬಸಪ್ಪ ಅಪ್ಪ ಅವರ ತಾತ್ವಿಕ ಚಿಂತನೆಗಳ ಸಹವರ್ತಿಗಳಾಗಿ ಶ್ರೀಗಳವರು ಕಾರ್ಯನಿರ್ವಹಿಸಿದರು. ತತ್ವಶಾಸ್ತ್ರದ ಬಗೆಗೆ ವಿಶೇಷ ಅಧ್ಯಯನವನ್ನು ಮಾಡಿದರು.

ಆ ಸಂದರ್ಭದಲ್ಲಿ ಶ್ರೀಶೈಲ ಪೀಠದ ಜಗದ್ಗುರುಗಳಾಗಿದ್ದ ವಾಗೀಶಪಂಡಿತಾರಾಧ್ಯರು ಹರಿಹರದಲ್ಲಿ ಕಾಲೇಜೊಂದನ್ನು ತೆರೆದು ಅಲ್ಲಿಗೆ ಶ್ರೀಚಂದ್ರಮೌಳೀಶ್ವರ ಶ್ರೀಗಳವರನ್ನು ಆಹ್ವಾನಿಸಿ ಸಂಸ್ಥಾಪಕ ಪ್ರಾಂಶುಪಾಲರನ್ನಾಗಿಸಿದರು. ೧೯೭೦-೭೨ ರಲ್ಲಿ ಆ ಸಂಸ್ಥೆಯನ್ನು ತಮ್ಮ ಕರ್ತೃತ್ವ ಶಕ್ತಿಯಿಂದ ಶ್ರೀಗಳವರು ಜವಾಬ್ದಾರಿಯುತವಾಗಿ ಕಟ್ಟಲು ಹೆಗಲುಕೊಟ್ಟರು ಶ್ರೀಶೈಲ ಪೀಠದ ಸಂಸ್ಥೆ ಒಂದು ಪೂರ್ಣಪ್ರಮಾಣದ ಸಂಸ್ಥೆಯಾಗಲುಶ್ರೀಗಳವರ ಸತತ ಕ್ರಿಯಾಶೀಲತೆಯು ಕಾರಣವಾಗಿದೆ. ಈ ಸಂದರ್ಭದಲ್ಲಿ ಅವರ ಅಂತರಂಗದಲ್ಲಿ ಇದ್ದ ಶೈಕ್ಷಣಿಕ ಸಂಸ್ಥೆಯ ಬಗೆಗಿನ ಕನಸುಗಳು ಸಕಾರಗೊಳ್ಳಲು ಇದೊಂದು ಸಂಧಿಕಾಲವಾಗಿತ್ತು ಗ್ರಾಮೀಣ ಪ್ರದೇಶದಲ್ಲಿ ಎಂತಹ ಶಿಕ್ಷಣ ಬೇಕು? ಬಳ್ಳಾರಿ ಜಿಲ್ಲೆಯಂತಹ ಬಡ ಜಿಲ್ಲೆಗೆ ಸೂಕ್ತವಾಗುವಂತಹ ತರಬೇತಿ ಸಂಸ್ಥೆಗಳಾವುವು? ಅದರ ಅನಿವಾರ್ಯತೆ, ಅದರ ಗಂಭೀರತೆಗಳ ಆಳ – ಅಗಲಗಳನ್ನು ಗುರುತು ಹಾಕಿಕೊಂಡರು

ಶೈಕ್ಷಣಿಕ ಸಂಸ್ಥೆಯೊಂದನ್ನು ಕಟ್ಟಬೇಕೆಂದಾಗ ಎದುರಾಗಬಹುದಾದ ಪೂರ್ವಪರ ಸವಾಲುಗಳನ್ನು ಕಂಡುಕೊಂಡರು ಹಣಕಾಸಿನ ವ್ಯವಸ್ಥೆ ಅಗತ್ಯ ಬಂಡವಾಳದ ಕ್ರೋಢೀಕರಣ ಸೂಕ್ತವಾದ ಸ್ಥಳ ಇತ್ಯಾದಿಗಳ ಬಗೆಗೆ ಒಂದು ನಿರ್ದಿಷ್ಟ ನಿಲುವಿಗೆ ಬಂದರು ಅದರಂತೆ ೧೯೭೦-೭೧ ರಲ್ಲಿ ಶೈಕ್ಷಣಿಕ ಸಂಸ್ಥೆಯೊಂದನ್ನು ಆರಂಭಿಸಿದರು ಪ್ರಪ್ರಥಮವಾಗಿ ಟ್ರೈನಿಂಗ್ ಇನಿಸ್ಟಿಟ್ಯೂಟ್ ಕಾಲೆಜೊಂದನ್ನು ಸಂಸ್ಥೆಯಡಿ ತೆರೆದರು ತೆಗ್ಗಿನಮಠ ಆರ್ಟ್ಸ್ ಅಂಡ್ ಎಜುಕೇಶನ್ ಸೊಸೈಟಿ ಎಂಬ ಸಂಸ್ಥೆಯನ್ನು ನೊಂದಾಯಿಸಿಕೊಂಡು ಹರಪನಹಳ್ಳಿ ಪಟ್ಟಣದ ಬಳಿಯಿರುವ ಗೋಸಾವಿ ದಿಬ್ಬದ ಬಳಿ ಅವರ ಕಲ್ಪನೆಯ ಕಟ್ಟಡ ಮೂರ್ತಸ್ವರೂಪವನ್ನು ಪಡೆದುಕೊಂಡಿತು.

ದಿನಾಂಕ;೬ನೇ ಫೆಬ್ರವರಿ ೧೯೭೩ ಅವರ ಪಾಲಿಗೆ, ಮಹತ್ವದ ದಿನ ಅದು ರಂಭಾಪುರಿಪೀಠದ ಜಗದ್ಗುರುಗಳಾದ ಪರಮ ಪೂಜ್ಯ ಶ್ರೀವೀರಗಂಗಾಧರ ಶಿವಾಚಾರ್ಯರ ದಿವ್ಯ ಸನ್ನಿದಾನದಲ್ಲಿ ಶ್ರೀಗಳವರಿಗೆ ಪಟ್ಟಾಧಿಕಾರ ಧಾರಣೆಯಾಯಿತು. ಅಲ್ಲಿಯವರೆಗೂ ಮರಿದೇವರಾಗಿದ್ದ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯರು ಷಟಸ್ಥಲ ಬ್ರಹ್ಮಿಗಳಾದರು, ಪರಮಪೂಜ್ಯ ಶ್ರೀಚಂದ್ರಶೇಖರ ಶಿವಾಚಾರ್ಯರ ಕರಕಮಲ ಸಂಜಾತರಾದ ಇವರಿಗೆ ಅಂದಿನಿಂದ ಅವರಿಗೆ ಹೊಸ ಜವಬ್ದಾರಿಗಳು ಹೆಗಲೇರಿದವು. ಒಂದು ಕಡೆ ವೀರಶೈವ ಧರ್ಮದ ಸಂವರ್ಧನೆಗೆ ದುಡಿಯಬೇಕಾದ ಅನಿವಾರ್ಯತೆ ಮತ್ತೊಂದು ಕಡೆ ಸಾಮಾಜಿಕ ಪುನರಚನೆಯ ಅನಿವಾರ್ಯತೆ ಮಗದೊಂದಡೆ ಪಾರಮಾರ್ಥಿಕ ಸಾಧನೆಯ

ಅನಿವಾರ್ಯತೆ ಹೀಗೆ ಹಲವಾರು ಅನಿವಾರ್ಯತೆಗಳ ಸೆಳವಿನಲ್ಲಿ ಬಿದ್ದರು. ಇವೆಲ್ಲದರ ಜವಬ್ದಾರಿಗಳ ಜೊತೆಗೆ ತಮ್ಮ ಕನಸಿನ ಸಮುದಾಯದ ಶಿಕ್ಷಣದ ಆಲೋಚನೆಗಳು ಒಟ್ಟೊಟ್ಟಿಗೆ ಸವಾಲನ್ನು ಒಡ್ಡಿದವು. ಈ ಎಲ್ಲಾ ಸವಾಲುಗಳನ್ನು ನಿಬಾಯಿಸುವ ಶಕ್ತಿಯನ್ನು ಪೂರ್ವದ ಶಿವಾಚಾರ್ಯರಾದ ಶ್ರೀಚಂದ್ರಶೇಖರಶಿವಾಚಾರ್ಯರು ಹಾಗೂ ರಂಭಾಪುರಿ ಪೀಠದ ಜಗದ್ಗುರು ಶ್ರೀವೀರಗಂಗಾಧರ ಶಿವಾಚಾರ್ಯರು ದಯಪಾಲಿಸಿದರು. ಆ ಕಾರಣದಿಂದಾಗಿ ಗುಡ್ಡದಂತೆ ಕಂಡು ಬಂದ ಸವಾಲುಗಳು ಮಂಜಿನಂತೆ ಕರಗಿ ನೀರಾದವು. ಇಂತಹ ವಿಷಮ ಪರಿಸ್ಥತಿ ಅವರ ಜೀವನದ ದಿಕ್ಕನ್ನು ಬದಲಾಯಿಸಿದವು ಅವರ ಆಲೋಚನೆಗಳ ವಿವಿಧ ಆಯಾಮಗಳನ್ನು ಕಂಡುಕೊಂಡವು ಬಳ್ಳಾರಿ ಜಿಲ್ಲೆಯ ಜನತೆಗೆ ತಾಂತ್ರಿಕ ಶಿಕ್ಷಣವಾಗಲಿ ಉನ್ನತ ತರಬೇತಿ ಶಿಕ್ಷಣ ಸಂಸ್ಥೆಗಳಾಗಲಿ ಸುಲಭವಾಗಿ ದೊರಕುತ್ತಿರಲಿಲ್ಲ. ಆ ಕಾರಣದಿಂದ ಅಲ್ಲಿಯ ಜನತೆ ಶೈಕ್ಷಣಿಕ ಅವಕಾಶಗಳಿಂದ ವಂಚಿತರಾಗಿದ್ದರು.[೬]

## ೪.೨ ದತ್ತಿ ದಾನ ಕೊಟ್ಟವರು

ಆರಂಭದಲ್ಲಿ ಯಾವುದೇ ತೊಂದರೆಯಿಲ್ಲದೇ ನಡೆದ ಶೈಕ್ಷಣಿಕ ಸಂಸ್ಥೆ ಬೆಳೆಯುತ್ತಾ ಬೆಳೆಯುತ್ತಾ ಹತ್ತಾರು ಸಮಸ್ಯಗಳನ್ನು, ಹಾಗೂ ಸವಾಲುಗಳನ್ನು ಸೃಷ್ಟಿಸಿಕೊಂಡಿತು. ಹಣಕಾಸಿನ ಪರಿಸ್ಥಿತಿ ದಿನ ದಿನಕ್ಕೆ ಬಿಗಡಾಯಿಸುತ್ತಾ ನಡೆದಿತ್ತು. ಭಕ್ತರು ನೀಡಿದ ಉಧಾರ ದೇಣಿಗೆ ಅರ್ಪಿಸಿದ ಕಾಣಿಕೆಗಳ ಸಂಸ್ಥೆಯನ್ನು ನಡೆಸಲಿಕ್ಕೆ ಸಾಲದಾದವು. ಆಗ ವಿಧಿಯಿಲ್ಲದೇ ಶ್ರೀಗಳವರು ಧರ್ಮ ಯಾತ್ರೆಯನ್ನು ಕೈಕೊಳ್ಳಬೇಕಾಯಿತು. ೧೯೭೩-೭೪ ರಲ್ಲಿ ಅವರು ಇಂತಹ ಧರ್ಮಯಾತ್ರೆಗಳನ್ನು ಕೈಗೊಂಡರು ಅಲ್ಲಿ ಕೀರ್ತನೆ ಪ್ರವಚನ ಉಪನ್ಯಾಸ, ಉಪದೇಶ ಮುಂತಾದ ಧರ್ಮ ಸಂಬಂಧಿಯಾದಂತಹ ಕಾರ್ಯಕ್ರಮಗಳನ್ನು ಆಯೋಜಿಸಿ ಮಠಕ್ಕೆ ಸಂಪನ್ಮೋಲಗಳನ್ನು ಕ್ರೋಢಿಕರಿಸಿದರು. ಇವರ ಧರ್ಮಯಾತ್ರೆ ಅತ್ಯಂತ ಪವಿತ್ರವಾದದ್ದು, ಸದ್ಭಕ್ತರನ್ನು ಹುಡುಕಿಕೊಂಡು ಜಂಗಮನಂತೆ ಜಂಗಮಿಸಿದರು. ಭಕ್ತರ ಮನೆಗಳಿಗೂ ದಯಾಮಾಡಿಸಿ ಪೂಜಾಕಾರ್ಯಗಳನ್ನು ನೆರವೇರಿಸಿ, ಭಕ್ತರನ್ನು ಸಂಪ್ರೀತಗೊಳಿಸುತ್ತಿದ್ದರು. ಇದರಿಂದಾಗಿ ಭಕ್ತರು ಭಕ್ತಿಪೂರ್ವಕವಾಗಿ ಶ್ರೀಗಳವರಿಗೆ ಉದಾರ ದಾನ ಧರ್ಮ ಮಾಡಿದರು ಭಕ್ತರ ಕೊಡುಗೈ ದಾನವು ಶಿಕ್ಷಣ ಸಂಸ್ಥೆಗೆ ಭದ್ರ ಬುನಾದಿಯನ್ನು ಹಾಕಲು ಆರ್ಥಿಕವಾಗಿ ಸಹಾಯಕವಾಯಿತು. ಇಂತಹ ಸಂಸ್ಥೆಯಾದ ತೆಗ್ಗಿನಮಠ ಆರ್ಟ್ಸ್ ಅಂಡ್ ಎಜುಕೇಶನ್ ಸೊಸೈಟಿ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳ ಪಾಲಿಗೆ ಸೇರ್ಪಡೆಯಾಯಿತು.




## ೪.೩ ಮೃತ್ಯವನ್ನು ಮೆಟ್ಟನಿಂತ ಮಹಾಂತ

"ಬೆಳೆಯುವ ಗುಣ ಮೊಳಕೆಯಲ್ಲಿ ಕಂಡಿತು ಧರ್ಮ ಪುರುಷನ ಪವಾಡ ಶಕ್ತಿ ಬಾಲ್ಯದಿಂದಲೇ ಸೂಚಕವಾದೀತು. ಎಂಬ ಸತ್ಯವಾಣಿಗೆ ಪೂರಕವಾಗಿ ಶ್ರೀಗಳವರ ಕೆಲ ಪವಾಡಗಳನ್ನು ಕೇಳಿದ ರೀತಿಯಲ್ಲಿ ಹೀಗೆ ಅಭಿವ್ಯಕ್ತಗೊಳಿಸುವದು ಸೂಕ್ತ ಎಂದು ಭಾವಿಸಿ ಅವುಗಳನ್ನು ವಿವರಿಸಿದ್ದೇನೆ

ಶ್ರೀಗಳವರ ಬಾಲ್ಯಾವಸ್ಥೆಯ ಕಾಲದಲ್ಲಿ ಅವರ ಮನೆಯಲ್ಲಿ ನಾಗ್ಯ ಎಂಬ ಹೋರಿ ಇದನ್ನು ಬಹುವಾಗಿ ಪ್ರೀತಿಸುತ್ತಿದ್ದ ಶ್ರೀಗಳವರು ಅಂದಾಜು ೧೦ ವರ್ಷಗಳ ಕಿರು ವಯಸ್ಸಿನಲ್ಲಿ ಇದನ್ನು ಮೇಯಿಸಲು ಹೊಲಕ್ಕೆ ಒಡೆದುಕೊಂಡು ಹೋಗುತ್ತಿದ್ದರು. ಆ ಹೋರಿಯ ಹಗ್ಗವನ್ನು ತಮ್ಮ ನಡುವಿಗೆ ಕಟ್ಟಿಕೊಂಡು ಮೇಯಿಸುತ್ತಿದ್ದಾಗ ಆಕಸ್ಮಾತ್ ಬೆದರಿದ ಹೋರಿ ಗಕ್ಕನೆ ಎಗರಿ ಬಾಲ್ಯವಸ್ಥೆಯಲ್ಲಿದ್ದ ಶ್ರೀಗಳವರನ್ನು ಎಳೆದುಕೊಂಡು ನಾಗಾಲೋಟದಿಂದ ಓಡುತ್ತಾ ಹೊಲದಲ್ಲಿಯ ಕವುಲಗಳೆನ್ನದೇ, ಕಲ್ಲು ಮುಳ್ಳುಗಳೆನ್ನದೇ ಹೊಲದಿಂದ ನಾಗತಿಬಸಾಪುರದ ಗ್ರಾಮದವರೆಗೂ ಜಗ್ಗಿ ತಂದು ಗ್ರಾಮದಲ್ಲಿಯ

ಸಣ್ಣ ಮಟ್ಟ ಗೋಡೆಗಳ ಮೇಲೆಯೂ ಜಗಿಯುವಾಗ ಇವರ ದೇಹವು ಸಹ ಗೋಡೆಗಳಲ್ಲಿ ಎದ್ದು ಬಿದ್ದು ಮುಂದೆ ಸಾಗುತ್ತಿದ್ದಾಗ ಅವರ ದೇಹದ ಸ್ಥಿತಿ ರಕ್ತಮಯವಾಗಿತ್ತು. ಕಲ್ಲುಗಳು ಬಡಿದು ತಲೆಯಲ್ಲಿ ತೂತುಗಳಾಗಿದ್ದವು. ಎಳೆತದ ಸೆಳವಿಗೆ ಸಿಕ್ಕ ಇಡೀ ದೇಹ ಕೊರೆದುಹೋಗಿ ಇಡೀ ದೇಹವೇ ಗಾಯಗಳಿಂದ ತುಂಬಿತ್ತು ಆಹೋರಿ ಆಗ್ರಾಮದ ಭೀಮಪ್ಪನೆಂಬ ರೈತನಿಗೆ ಮಾತ್ರ ಹೆದರುತ್ತಿರುವುದರಿಂದ ಆ ಭೀಮಪ್ಪ ಹೋರಿಯನ್ನು ತಡೆದು ನಿಲ್ಲಿಸಿದಾಗ ಬಾಲಕನ ಆವಸ್ಥೆ ಚಿಂತಾಜನಕ ರಕ್ತದ ಲೇಪನದಲ್ಲಿಯೆ ಇದ್ದ ಬಾಲಕನು ಪ್ರಜ್ಞಾಹೀನಾವಸ್ಥೆಯಲ್ಲಿದ್ದ ತಲೆಯಿಂದ ಬಸಿಯುವ ರಕ್ತಸ್ರಾವವನ್ನು ಬಟ್ಟೆಗಳನ್ನು ತುರುಕಿ ತಡೆದು ಪ್ರಜ್ಞಾಹೀನ ಆವಸ್ಥೆಯಲ್ಲಿಯೇ ಹರಪನಹಳ್ಳಿ ಡಾಕ್ಟರ್ ರಾಮರಾಯರ ಆಸ್ಪತ್ರೆಗೆ ತರಲು ಅಂದಾಜು ಅರ್ಧ ದಿನವೇ ಹಿಡಿಯಿತು. ಅಂದಿನ ಕಾಲದಲ್ಲಿ ಸಾರಿಗೆ ವ್ಯವಸ್ಥೆ ಇರಲಿಲ್ಲ. ಅವರು ಚಿಕಿತ್ಸೆ ನೀಡಿ ಬಾಲಕನ ಸ್ಥಿತಿಗತಿಗಳನ್ನು ಪರಿಕ್ಷಿಸಿದ ಡಾಕ್ಟರ್ ಈ ಬಾಲಕ ಹೇಗೆ ಬದುಕಿದ ! ಈ ಅಪಘಾತದ ತೀವ್ರತೆಯನ್ನು ತಿಳಿದ ಮೇಲಂತೂ ಇದು ಒಂದು ಪವಾಡ ಸದೃಶವೆಂದೇ ಉದ್ಗಾರ ತೆಗೆದರು.

ಶ್ರೀಗಳವರು ತಮ್ಮ ತಾರುಣ್ಯದಲ್ಲಿ ರಾಮನ ಹಬ್ಬದಲ್ಲಿ ಕುಣಿಯುವಾಗ ಆವೇಶದ ಸ್ಫೂರ್ತಿಯಲ್ಲಿ ತಮ್ಮ ನಾಲಿಗೆಯನ್ನೇ ಹಲ್ಲುಗಳಿಂದ ಕಡಿದುಕೊಂಡಾಗ ನಾಲಿಗೆಯ ತುಂಡು ಕೆಳಗೆ ಬಿದ್ದರೂ ಅದರ ಪರಿವೆಯೇ ಇಲ್ಲ. ಅದನ್ನು ವೀಕ್ಷಿಸಿದ ಜನರು ಆ ನಾಲಿಗೆಯ ತುಂಡು ಸಮೇತವಾಗಿ ಡಾ. ರಾಮರಾಯರಲ್ಲಿಗೆ ತಂದದ್ದು ಪುನಃ ನಾಲಿಗೆಗೆ ಸೇರಿಸಿ ಹೊಲಿಗೆ ಹಾಕಿ ಈ ಗಾಯವನ್ನು ಮಾಸಿದುದು ನಿಜವಾಗಿಯೂ ಒಂದು ಪವಾಡದ ಪ್ರತೀಕ.

ಶ್ರೀಗಳವರು ಶ್ರೀತೆಗ್ಗಿನಮಠದ ಪೀಠಾರೋಹಣದ ನಂತರ ಶ್ರೀಮಠದ ಜೀರ್ಣೋದ್ಧಾರಕ್ಕಾಗಿ ಕೆಲ ಭಕ್ತಾಧಿಗಳ ಗುಂಪು ಕಟ್ಟಿಕೊಂಡು ಕೀರ್ತನ ಕಾರ್ಯಕ್ರಮಗಳನ್ನು ನೆರವೇರಿಸುತ್ತಾ ದೇಣಿಗೆ ವಸೂಲಿಗಾಗಿ ಉರೂರುಗಳಲ್ಲಿ ಅಲೆದುದ್ದುಂಟು ಮಳೆ ಬಂದು ಈ ಮಳೆಗಾಲದಲ್ಲಿ ಒಂದು ದಿನ ಹಿರೇಕೊಳಚಿ ಗ್ರಾಮದ ಹಳ್ಳವು ಹರಿಯುವಾಗ ಆ ಹಳ್ಳದ ನೀರಿನ ಸೆಳವಿನಲ್ಲಿಯೇ ಜೀಪು ಹಳ್ಳ ದಾಟಲು ಧುಮುಕಿತು ನೀರಿನ ಸೆಳವಿಗೆ ಸಿಕ್ಕ ಜೀಪು ಹಂಕು ಡೊಂಕಾಗಿ ಚಲಿಸುತ್ತಾ ಚಾಲಕನ ಹತೋಟಿ ತಪ್ಪಿ ಎಲ್ಲೆಲ್ಲೊ ಚಲಿಸುವಾಗ ಜೀಪಿನದಲ್ಲಿದ್ದ ಶ್ರೀಗಳವರ ಮಂತ್ರೋಚ್ಚಾರಣೆಯಿಂದ ಜೀಪು ಸುರಕ್ಷಿತವಾಗಿ ದಂಡೆ ತಲುಪಿದುದು ಒಂದು ಆಶ್ಚರ್ಯಕರ ಸಂಗತಿ ಗ್ರಾಮದವರನ್ನು ಬೆಕ್ಕಸ ಬೆರಗುಗೊಳಿಸಿದ ಒಂದು ಪವಾಡ.

ದೇವರ ಬೆಳಕೆರೆ ಗ್ರಾಮದಲ್ಲಿ ಇಟಗಿ ಪರಮೇಶಪ್ಪನವರ ಮನೆಯ ಪಕ್ಕದಲ್ಲಿ ಒಂದು ದೊಡ್ಡ ಆಲದ ಮರವಿದೆ ಈ ಆಲದ ಮರದಲ್ಲಿ ಬ್ರಹ್ಮರಾಕ್ಷಸ ವಾಸಿಸಿದ್ದು ಪರಮೇಶಪ್ಪನವರ ಮನೆಯಲ್ಲಿ ಬಹಳಷ್ಟು ಕಾಟಕೊಡುತ್ತಿದ್ದು ಶ್ರೀಗಳವರು ಆ ಗ್ರಾಮಕ್ಕೆ ಹೋದಾಗ ಈ ವಿಷಯವನ್ನು ನಿವೇದಿಸಿಕೊಂಡರು ಪರಿಹಾರಕ್ಕಾಗಿ ಪ್ರಾರ್ಥಿಸಿಕೊಂಡರು ಒಳ್ಳೆಯ ಯವ್ವನದಲ್ಲಿದ್ದು ಜಪ ತಪ ಮಂತ್ರಗಳಿಂದ ಸಿದ್ಧಿ ಪಡೆದಿದ್ದ ಸ್ವಾಮಿಗಳು ಪರಮೇಶಪ್ಪನವರ ಮನೆಯಲ್ಲಿ ರುದ್ರಾಭಿಷೇಕ ಮಾಡಿದಾಗ ಆ ಬ್ರಹ್ಮ ರಾಕ್ಷಸ

ಮನೆಯನ್ನು ಬಿಟ್ಟು ತೊಲಗುವ ಲಕ್ಷಣ ಭೀಕರವಾಗಿದ್ದವು. ಮನೆಯು ಗಡ ಗಡ ನಡುಗುತ್ತಿತ್ತು. ಆ ನಡುಗಿಗೆ ಮನೆ ತುಂಬಾ ಮೆಟ್ಟಲು ಬಾಗಿಲುಗಳು ನಡುಗುತ್ತಾ ಕಪಾಟುಗಳು ಬಡಿದುಕೊಳ್ಳುತ್ತಿದ್ದವು. ಕೊನೆಗೆ ಈ ಬ್ರಹ್ಮ ರಾಕ್ಷಸ ಮನೆ ಬಿಟ್ಟು ತೊಲಗಿದಾಗ ಶಾಂತ ವಾತಾವರಣ ತುಂಬಿ ಮನೆಯು ಸುಲಕ್ಷಣವಾಗಿ ಕಂಡು ಬಂದುದ್ದನ್ನು ಅನುಭವಿಸಿದ ಪರಮೇಶ್ವರಪ್ಪ ಮತ್ತು ಕುಟುಂಬದವರು ಹಾಗೂ ಗ್ರಾಮದವರು ಈ ಘಟನೆ ಶ್ರೀ ಸ್ವಾಮಿಗಳ ಪವಾಡದಿಂದಲೆ ಆಯಿತೆಂದು ವಿಶ್ಲೇಶಿಸಿದರು ಈ ಗ್ರಾಮದವರು ಈಗಲೂ ಶ್ರೀಗಳವರನ್ನು ಪವಾಡ ಪುರುಷರೆಂದೇ ಗೌರವಿಸುತ್ತಾರೆ. ಈ ಪವಾಡ ಸದೃಶ ಶಕ್ತಿಯನ್ನು ತಿಳಿದುಕೊಂಡು ಸುತ್ತಮುತ್ತಲಿನ ಸಾಲು ಕಟ್ಟಿ ಮೆಟ್ಟಲುಕಟ್ಟಿ ಬಾನುವಳ್ಳಿ, ಬನ್ನಿಕೋಡು ನಂದಿಗಾವಿ, ದೂಳೆಹೊಳೆ ಮತ್ತು ಹೊಳೆ ಸಿರಿಗೆರೆ ಗ್ರಾಮದವರು ಶ್ರೀಗಳವರನ್ನು ಪವಾಡ ಪುರುಷರನ್ನಾಗಿ ಪೂಜ್ಯ ದೃಷ್ಟಿಯಲ್ಲಿ ನೋಡುವುದು ಒಂದು ಸಂಪ್ರದಾಯವಾಗಿದೆ.

೧೯೮೫ ರಲ್ಲಿ ಶ್ರೀಗಳವರು ಕಾರಿನಲ್ಲಿ ಬೆಂಗಳೂರಿಗೆ ಪ್ರಯಾಣಿಸುವಾಗ ರಾತ್ರಿ ೨ ಗಂಟೆ ಸುಮಾರಿಗೆ ಚಿತ್ರದುರ್ಗ ದಾಟಿದ ನಂತರ ಹಿರಿಯೂರು ಸಮೀಪ ಶ್ರೀಗಳವರ ಕಾರು ಮುಂದೆ ಹೋಗುತ್ತಿದ್ದ ಲಾರಿಯ ಹಿಂಭಾಗಕ್ಕೆ ಡಿಕ್ಕಿ ಹೊಡೆದು ಲಾರಿಯ ಹಿಂಬಾಗದ ಬುಡಕ್ಕೆ ತೂರಿಕೊಂಡಾಗ ಕಾರಿನ ಇಡೀ ಟಾಪ್ ಚಪ್ಪಟೆಯಾಗಿ ಕಾರಿನಲ್ಲಿರುವ ಎಲ್ಲರನ್ನು ಅಪ್ಪಚ್ಚಿ ಮಾಡಲು ಶ್ರೀಗಳವರ ತಲೆಗೆ ತಗುಲಿದ ಟಾಪಿನ ತಗಡು ತಲೆ ತುಂಬಾ ಚುಚ್ಚಿಕೊಂಡು ದೊಡ್ಡ ದೊಡ್ಡ ಗಾಯಗಳಾಗಿ ರಕ್ತಸ್ರಾವವಾಯಿತು ಅಂತಹ ದುರ್ಧರ ಪ್ರಸಂಗದಲ್ಲಿಯೂ ಶ್ರೀಗಳವರು ಕಾರಿನಿಂದ ಹೊರ ಬಂದು ತಲೆಗೆ ಬಟ್ಟೆಯನ್ನು ಬಲವಾಗಿ ಕಟ್ಟಿಕೊಂಡು ರಕ್ತಸ್ರಾವವನ್ನು ತಡೆಯಿಸಿ ಕಾರಿನಲ್ಲಿದ್ದ ಎಲ್ಲರನ್ನು ಹೊರಗೆಳೆದು ಅವರ ಪುಜಾ ಸಮಾನು ಪಾಗೂ ಇತರೇ ವಸ್ತುಗಳನ್ನು ಹೊರಗೆಳೆದುಕೊಂಡು ಒಂದು ಲಾರಿಯನ್ನು ನಿಲ್ಲಿಸಿ ಆ ಲಾರಿಯಲ್ಲಿ ಎಲ್ಲರ ಸಮೇತ ಚಿತ್ರದುರ್ಗಕ್ಕೆ ದಾವಿಸಿ ಆಸ್ಪತ್ರೆಯಲ್ಲಿ ತಾವು ಸಹಿತವಾಗಿ ಚಿಕಿತ್ಸೆಗಾಗಿ ಸೇರಿಕೊಂಡು ಶುಶ್ರೂಷೆ ಹೊಂದಿ ಹೊರ ಬಂದದ್ದು ಅವರ ದೈವ ಬಲ ಮತ್ತು ಪವಾಡ ಶಕ್ತಿಯ ಸಂಕೇತ.

ಅಂದಾಜು ೧೫ ವರ್ಷಗಳ ಹಿಂದೆ ಜರುಗಿದ ಒಂದು ವಿಸ್ಮಯಕಾರಿ ಘಟನೆ ಹಾವೇರಿ ತಾಲೂಕಿನ ನೆಗಳೂರು ಗ್ರಾಮದ ಶ್ರೀ. ಶಿವಾನಂದ ಶಿವಾಚಾರ್ಯ ಸ್ವಾಮಿಗಳು ಗೋವಾದಲ್ಲಿ ಒಂದು ಈಶ್ವರ ದೇವಸ್ಥಾನ ಕಟ್ಟಿಸಿ, ಪ್ರತಿ ವರ್ಷ ಜಾತ್ರೆ ಜರುಗುವಂತೆ ಒಂದು ರಥವನ್ನು ಸಹ ನಿರ್ಮಾಣ ಮಾಡಿಸಿದ್ದರು. ಈ ರಥೋತ್ಸವದ ಉದ್ಘಟನೆಗಾಗಿ ಶ್ರೀ ಚಂದ್ರಮೌಳೀಶ್ವರ ಶಿವಾಚಾರ್ಯ ಸ್ವಾಮಿಗಳನ್ನು ಆಹ್ವಾನಿಸಿ ಕಾರಿನಲ್ಲಿ ಶ್ರೀಗಳವರು ಅಕಳಾಂಡಸ್ವಾಮಿಮಠ ಮತ್ತು ಪ್ರೊ. ಅ. ಸಿ. ಹಿರೇಮಠ ಅವರೊಂದಿಗೆ ಪ್ರಯಾಣಿಸಿದರು. ಪ್ರಾಥಕಾಲ ಸಮಯದಂದು ಕಾರು ವೇಗವಾಗಿ ಚಲಿಸುತ್ತಿತ್ತು. ಗೋವಾ ಅಂದಾಜು ೫೦ ಕಿ.ಮೀ. ಇರಬಹುದು ಅಲ್ಲಿ ದಟ್ಟವಾದ ಅಡವಿ ಪ್ರದೇಶ ಅಲ್ಲೊಂದು ದೊಡ್ಡ ಹಳ್ಳಕ್ಕೆ ಅಡ್ಡವಾಗಿ ಕಟ್ಟಿಸಿದ ಹಳೆ ಸೇತುವೆಯನ್ನು ಕೆಡವಿದ್ದಾರೆ ಅಂದಾಜು ೨೦ ಅಡಿ ಉದ್ದ ೨೦ ಅಡಿ ಆಳದ ಕಂದರ ಪಕ್ಕದ ತಾತ್ಕಾಲಿಕವಾಗಿ ನಿರ್ಮಿಸಿದ ರಸ್ತೆಯನ್ನು ಗಮನಿಸಿದ ಚಾಲಕ ನೇರವಾಗಿ ಹಾಳು ಬಿದ್ದ

ಸೇತುವೆಯ ಮೇಲೆಯೇ ಕಾರನ್ನು ಓಡಿಸಿದ ಇನ್ನೇನು ಕಾರು ಕಂದಕದಲ್ಲಿ ಬೀಳಬೇಕು ಅಂತಹ ದುರ್ಧರ ಪ್ರಸಂಗದಲ್ಲಿ ಕಾರು ತನ್ನಷ್ಟಕ್ಕೆ ತಾನೇ ರಸ್ತೆಯ ಬಲಗಡೆಯ ಇಳಿಜಾರಿನಲ್ಲಿರುವ ಪಕ್ಕದ ಅಡವಿಯಲ್ಲಿಯ ಗಿಡಮರಗಳನ್ನು ದಾಟಿ ಸೇತುವೆಯ ಆಚೆಗಿನ ರಸ್ತೆಯಲ್ಲಿ ಬಂದು ನಿಂತಿದ್ದುದನ್ನು ಗಮನಿಸಿದ ಎಲ್ಲರೂ ಆಶ್ಚರ್ಯ ಚಕಿತರಾಗಿ ಈ ಘಟನೆಯು ನಿಜವಾಗಿಯೂ ಶ್ರೀಗಳವರ ಪವಾಡವೆಂದೇ ಭಾವೋದ್ವೇಗದಿಂದ ಉದ್ಗಾರ ಮಾಡಿದುದ್ದುಂಟು– [೭]

## ಟಿಪ್ಪಣಿಗಳು

೧. ತೆಗ್ಗಿನಮಠದ ಶ್ರೀ ಚಂದ್ರಶೇಖರ ಶಿವಾಚಾರ್ಯರು: ಪುಟ– ೧

೨. ಕರ್ತಾರನ ಕ್ರಾಂತ ದೃಷ್ಟಿ: ಪುಟ– ೨೫

೩. ತೆಗ್ಗಿನಮಠದ ಶ್ರೀ ಚಂದ್ರಶೇಖರ ಶಿವಾಚಾರ್ಯರು: ಪುಟ– ೧೦

೪. ತೆಗ್ಗಿನಮಠದ ಶ್ರೀ ಚಂದ್ರಶೇಖರ ಶಿವಾಚಾರ್ಯರು: ಪುಟ– ೨೬

೫. ಹಂತಿಯ ಪದಗಳ ಸೊಗಸು : ಪುಟ– ೫

೬. ಕರ್ತಾರನ ಕ್ರಾಂತ ದೃಷ್ಟಿ: ಪುಟ– ೪೦

೭. ಜ್ಞಾನದೀವಟಿಗೆ : ಪುಟ – ೭೧

# ಅಧ್ಯಾಯ : ಐದು

# ತೆಗ್ಗಿನಮಠದ ಸಾಧನೆ ಮತ್ತು ಕೊಡುಗೆ

"ವಚನ ಚಳುವಳಿಯ ನಂತರ ಮಠಗಳು ಅಖಂಡ ಕರ್ನಾಟಕದಲ್ಲಿ ಎಲ್ಲೆಡೆ ಕಂಡು ಬರುತ್ತವೆ. ಪಂಚಪೀಠಾದೀಶ್ವರರು ಸ್ಥಾಪಿಸಿದ ೫ ಪೀಠಗಳ ಅಡಿಯಲ್ಲಿ ಶಾಖಾ ಸಂಸ್ಥಾನ ಮಠಗಳನ್ನು ಪ್ರಾದೇಶಿಕವಾಗಿ ವಚನ ಚಳುವಳಿಯ ಹಿನ್ನೆಲೆಯಲ್ಲಿ ಸ್ಥಾಪಿತವಾದವು ಪ್ರಾದೇಶಿಕವಾಗಿ ಆಧ್ಯಾತ್ಮಿಕ, ನೈತಿಕ ತಿಳುವಳಿಕೆಯ ಕೇಂದ್ರಗಳಾಗಿ ಇವು ಹೊರ ಹೊಮ್ಮಿದವು ಸುತ್ತ ಮುತ್ತಲ ಸಾಂಸ್ಕೃತಿಕ ಶಕ್ತಿ ಕೇಂದ್ರಗಳಾಗಿ ರೂಪ ಪಡೆದವು ನಮ್ಮ ಕರ್ನಾಟಕದಲ್ಲಿ ಇಂತಹ ಶಾಖಾ ಸಂಸ್ಥಾನ ಮಠ ಹೊತ್ತಿರುವ ಸಾಮಾಜಿಕ ಶೈಕ್ಷಣಿಕ ಆಧ್ಯಾತ್ಮಿಕ ನೈತಿಕ ಜವಾಬ್ಧಾರಿಗಳು ಗಮನಾರ್ಹವಾದವುಗಳು. ಒಂದು ಮಠವಿದ್ದಲ್ಲಿ ಒಂದು ಗ್ರಂಥ ಭಂಡಾರ, ಸಾಂಸ್ಕೃತಿಕ ವೇದಿಕೆ ಆಧ್ಯಾತ್ಮಿಕ ಪುರಾಣ ಪ್ರವಚನಗಳ ನೆಲೆ ಇರುತ್ತದೆ. ಸಾಹಿತ್ಯ ನಾಟಕ ರಂಗಭೂಮಿ ಮತ್ತು ಇತರ ಜಾನಪದ ಕಲೆಗಳಿಗೆ ಸಂಸ್ಥಾನ ಆಶ್ರಯಗಳಿರುತ್ತವೆ, ಹಾಗಾಗಿ ನಮ್ಮ ಮಠ, ಮಾನ್ಯಗಳ ಕೊಡುಗೆ ಅಪಾರವಾದುದು. ಅವು ಹೊತ್ತಿರುವ ಸಾಮಾಜಿಕ , ಶೈಕ್ಷಣಿಕ ಹೊಣೆಗಾರಿಕೆ ಮಹತ್ವದ್ದು ಹಾಗಾಗಿ ಹಲವು ಮಠಗಳು ಸಂಪ್ರದಾಯ ನಿಷ್ಠತೆಯ ಜೊತೆಗೆ ಆಧುನಿಕತೆಯನ್ನು ಮೈಗೂಡಿಸಿಕೊಂಡು ಮುಂಬರುವ ಶತಮಾನಗಳಿಗೆ ಭವಿಷ್ಯದ ಪೀಳಿಗೆಗಳನ್ನು ಸಜ್ಜು ಮಾಡುವ ಸ್ಥಾವರಗಳಾಗಿ ಅಸ್ಥಿತ್ವದಲ್ಲಿವೆ.



ಶ್ರೀಚಂದ್ರಮೌಳೇಶ್ವರಸ್ವಾಮಿಗಳಿಗೆ ಬಂದ ಕರೆ ಎಂದರೆ ಹರಪನಹಳ್ಳಿ ಹಾಗು ಅದರ ಸುತ್ತಮುತ್ತಲಿರುವ ಸಾಮಾಜಿಕ ಸ್ಥಿತಿಗತಿಯನ್ನು ಸುಧಾರಿಸಲು ಜವಾಬ್ಧಾರಿಯನ್ನು ಹೊತ್ತುಕೊಳ್ಳುವುದು ೧೯೭೩ ರಲ್ಲಿ ಹರಪನಹಳ್ಳಿ ತೆಗ್ಗಿನಮಠದ ಪೀಠಾದಿಪತಿಗಳಾದರು ಆದರೆ ಸುತ್ತಲೂ ಕಂಡದ್ದು ಏನು? ಬಡತನ, ನಿರುದ್ಯೋಗ, ಅನಕ್ಷರತೆ, ಧರ್ಮಾಚರಣೆಯಲ್ಲಿ ಅನಾಸಕ್ತಿ ಅಲ್ಲಿಯ ಪರಿಸ್ಥಿತಿ ಹಾಗೂ ಸಮಸ್ಯೆಗಳು, ಹೀಗಿರುವಾಗ ಅವರ ದೂರ ದೃಷ್ಠಿ ಹಾಗೂ ತಪೋ ಬಲದ ಮುಖಾಂತರ ಸಮಸ್ಯೆಗಳಿಗೆ ಪರಿಹಾರ ಒದಗಿಸಲೇಬೇಕೆಂಬ ನಿರ್ಧಾರ ಅವರದಾಯಿತು. ಅದಕ್ಕಾಗಿ ಒಂದೊಂದು ಸಂಸ್ಥೆಯನ್ನು ಸ್ಥಾಪಿಸುವುದು. ಅದರಿಂದ ಒಂದೊಂದು ಸಮಸ್ಯೆಗಳನ್ನು ನಿವಾರಿಸಿದುದ್ದುಂಟು ಅದು ಅವರಿಂದ ನಡೆದುದು ಅಲ್ಲಿ ತೀವ್ರಗತಿಯಲ್ಲಿ ಹೆಚ್ಚು ವಿದ್ಯಾಸಂಸ್ಥೆಗಳನ್ನು ಅದರಲ್ಲಿ ಹೆಚ್ಚಾಗಿ ವೃತ್ತಿ ಶಿಕ್ಷಣಕ್ಕೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಇವುಗಳ ಮುಖಾಂತರ ದೇಶದ ಉದ್ದಗಲದಿಂದ ಬರುವ ಇಂದಿನ ಯುವ ಪೀಳಿಗೆಗಳಿಗೆ ಜ್ಞಾನ ಸಂಪತ್ತು ಸ್ವತಂತ್ರ ಜೀವನ ನಡೆಸಲು ಇಂದಿನ ಯುವಕರಿಗೆ ಅನುವು ಮಾಡಿಕೊಟ್ಟಿದ್ದಾರೆ. ಸ್ವಾಮೀಜಿಗಳು ಉದ್ಯೋಗ ಮೂಲ ಶಿಕ್ಷಣದತ್ತ ಗಮನ ಹರಿಸಿದರು ಓದಿದ

ನಂತರ "ಕಾಯಕವೇ ಕೈಲಾಸ" ಎಂಬುದನ್ನು ಅರಿತು ಉದ್ಯೋಗದಲ್ಲಿ ತೊಡಗುವಂತೆ ಶಿಕ್ಷಣವನ್ನು ನೀಡುತ್ತಿದ್ದಾರೆ. ಹಲವಾರು ಪಾಲಿಟೆಕ್ನಿಕ್ ಕೈಗಾರಿಕಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಿ ನಾಡಿನ ಹಾಗೂ ಹೊರನಾಡಿನ ಶಿಕ್ಷಣಾಭಿರುಚಿಯುಳ್ಳ ವಿದ್ಯಾರ್ಥಿ ಬಳಗಕ್ಕೆ ವಿಶೇಷ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟರು. ಶಿಕ್ಷಣ ಸಂಸ್ಥೆಗಳ ನಿರ್ಮಾಣ ಮಾಡಿದುದ್ದನ್ನು ಅಧ್ಯನಕ್ಕೆ ಒಳಪಡಿಸಲಾಗಿದೆ. ಹಾಗೂ ಚಂದ್ರಶೇಖರ ಶಿವಾಚಾರ್ಯ ದಾಸೋಹಕ್ಕೆ ಹೆಚ್ಚು ಮಹತ್ವ ನೀಡಿದ್ದು, ಪ್ರಸ್ತಾಪಿಸಲಾಗಿದೆ. ಹಾಗೂ ಶೈಕ್ಷಣಿಕ ದಾಸೋಹಕ್ಕೆ ಮಹತ್ವ ನೀಡಿದ್ದಾರೆ.೧ ಅಲ್ಲದೆ ಹೀಗೆ ಭಕ್ತರು ಸ್ವಾಮಿಗಳನ್ನು ಕುರಿತು ಹಾಡನ್ನು ಭಕ್ತಿಯಿಂದ ಹೇಳುತ್ತಾರೆ.

ಚಂದ್ರಮೌಳೀಶ್ವರ ನಮನ ಮಾಡುವೆ,
ಕರುಣಿಸಯ್ಯ ಶಿವಾಚಾರ್ಯ ವರವ ಬೇಡುವೆ
ಕರುಣಿಸಯ್ಯ ತಂದೆ ನಿನಗೆ ಕರವ ಮುಗಿಯುವೆ ॥ ಪ ॥

ಬಸಾಪುರ ಗ್ರಾಮದಲ್ಲಿ ಆಯ್ತು ಜನನವು
ಬಾಲ್ಯದಲ್ಲಿ ಭಾಸ್ಕರನ ಕರುಣೆ ಪಡೆದೆ
ಬಲಶಾಲಿಯಾಗಿ ಧರೆಗೆ ಅವತರಿಸಿದೆ.
ಭಜಿಸುವಂಥ ಭಕ್ತರ ಸಲಹ ಬಂದೆ ॥ ೧ ॥

ತಕ್ಕ ಗುರು ಚಂದ್ರಶೇಖರ ಕೃಪೆಯ ಪಡೆದೆ
ತೆಗ್ಗಿನಮಠಕೆ ನೀ ಒಡೆಯನಾದೆ.
ಹರಪನಹಳ್ಳಿ ಭಕ್ತರನ್ನು ಬಿಡದೇ ಪೊರೆದೆ
ಹರಪನಹಳ್ಳಿ ಹರನಪುರ ನೀನು ಮಾಡಿದೆ ॥ ೨ ॥

ಛಿದ್ರವಾದ ಪಾಳುಮಠದ ವೃದ್ಧಿಗೊಳಿಸಿದೆ.
ಭಕ್ತಕೋಟಿ ಜನರಿಗೆ ಸನ್ಮಾರ್ಗ ತೋರಿದೆ.
ಭಕ್ತಿಯಿಂದ ಭಜಿಸುವರಿಗೆ ಮುಕ್ತಿ ನೀಡುವೆ.
ಶಕ್ತಿವರದಾತನಾಗಿ ನಮ್ಮ ಪೋರೆಯುವೆ. ॥ ೩ ॥

ನಾಡು ನಾಡಿನಲ್ಲಿ ನೀನು ಸಂಸ್ಥೆ ಬೆಳಸಿದೆ.
ಕೋಟಿಜನ ಶಿಷ್ಯಂದಿರು ಲಾಭ ಪಡೆವರೆ
ಸಂಗೀತ, ಸಾಹಿತ್ಯ, ಸೇವೆ ನಡೆಸಿದೆ.
ಸಂತೋಷದಿಂದ ನಿತ್ಯ ತಪವಗೈಯುವೆ ॥ ೪ ॥

ಚಂದ್ರಶೇಖರ ಶಿವಾಚಾರ್ಯ ಕೃಪೆಯುಗೈವರೋ
ಚಂದ್ರಮೌಳೀಶ್ವರರು ಹರಸಿ ನಲಿವರೋ
ಯೋಗದಲ್ಲಿ ನಗುತ, ನಗುತ, ಜಪವ ಮಾಡುವೆ
ಯಂಕಂಚಿಪುರ ಮಠದ ಕಂದನ ಪೊರೆವೆ ॥ ೫ ॥

**ಟಿ.ಎಂ.ಎ.ಇ.ಸಂಸ್ಥೆಯ ಅಂಗ ಸಂಸ್ಥೆಗಳು**

೧. "ಎಸ್.ಸಿ.ಎಸ್.ಕಾಲೇಜ್ ಆಫ್ ಫಾರ್ಮಸಿ(ಎಂ.ಫಾರ್ಮಸಿ), ಹರಪನಹಳ್ಳಿ

೨. ಎಸ್.ಸಿ.ಎಸ್.ಕಾಲೇಜ್ ಆಫ್ ಫಾರ್ಮಸಿ(ಬಿ.ಫಾರ್ಮಸಿ), ಹರಪನಹಳ್ಳಿ

೩. ಎಸ್.ಸಿ.ಎಸ್.ಕಾಲೇಜ್ ಆಫ್ ಫಾರ್ಮಸಿ(ಡಿ.ಫಾರ್ಮಸಿ), ಹರಪನಹಳ್ಳಿ

೪. ಶಿಕ್ಷಣ ಮಹಾವಿದ್ಯಾಲಯ, ಡಿ.ಇಡಿ., ಹರಪನಹಳ್ಳಿ

೫. ಶಿಕ್ಷಕರ ತರಬೇತಿ ಕೇಂದ್ರ ಬಿ.ಇಡಿ., ಹರಪನಹಳ್ಳಿ

೬. ಶಿಕ್ಷಣ ಮಹಾವಿದ್ಯಾಲಯ, ಗಂಗಾವತಿ

೭. ಜಿ.ಜಿ.ಡಿ.ಫಾರ್ಮಸಿ ಕಾಲೇಜ್, ಲಕ್ಷ್ಮೇಶ್ವರ

೮. ಟಿ.ಎಂ.ಎ.ಇ. ಪಾಲಿಟೆಕ್ನಿಕ್, ಹೊಸಪೇಟೆ

೯. ಟಿ.ಎಂ.ಎ.ಇ. ಪಾಲಿಟೆಕ್ನಿಕ್, ಭದ್ರಾವತಿ

೧೦ ಆಯುರ್ವೇದಿಕ್ ಮೆಡಿಕಲ್ ಕಾಲೇಜ್, ಹೊಸಪೇಟೆ

೧೧ ಆಯುರ್ವೇದಿಕ್ ಮೆಡಿಕಲ್ ಕಾಲೇಜ್, ಭದ್ರಾವತಿ

೧೨. ಟಿ.ಎಂ.ಎ.ಇ.ಸಂಸ್ಥೆಯ ಸಿ.ಪಿ.ಎಡ್ ಕಾಲೇಜ್, ಹಾವೇರಿ

೧೩ ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಭದ್ರಾವತಿ

೧೪ ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಹೊಸಪೇಟೆ

೧೫. ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಚಿತ್ರದುರ್ಗ

೧೬. ಇಂಡಸ್ಟ್ರಿಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್, ಹಿರಿಯೂರ

೧೭ ಶ್ರೀಮಹರ್ಷಿ ವಾಲ್ಮೀಕಿ ಐ.ಟಿ.ಐ. ಸೋಸೈಟಿ ಕಟ್ಟಡ ಕುಂಬಾರ ಓಣಿ, ರಾಣೆಬೆನ್ನೂರು

೧೮ ಬಾಮೂಜಿ ಐ.ಟಿ.ಐ., ಲಕ್ಷ್ಮೇಶ್ವರ

೧೯. ಎಸ್. ತಿಮ್ಮಯ್ಯ ಶೆಟ್ರ ಐ.ಟಿ.ಐ., ಹಗರಿಬೊಮ್ಮನಹಳ್ಳಿ

೨೦. ಶ್ರೀ ಮಹಾರುದ್ರ ಸ್ವಾಮಿ ಐ.ಟಿ.ಯು., ಚನ್ನಗಿರಿ

೨೧. ಟಿ.ಎಂ.ಎ.ಇ.ಸಂಸ್ಥೆಯ ಐ.ಟಿ.ಐ. ಕಾಲೇಜ್, ಶಿವಮೊಗ್ಗ

೨೨. ಶ್ರೀ ಟೊಂಕದ ವೀರಪ್ಪ ಐ.ಟಿ.ಐ. ಕಾಲೇಜ್, ಹೊಸಪೇಟೆ

೨೩. ಟಿ.ಎಂ.ಎ.ಇ. ಎಸ್ ಪ್ರೌಢ ಶಾಲೆ, ಹರಪನಹಳ್ಳಿ

೨೪. ಟಿ.ಎಂ.ಎ.ಇ. ಎಸ್ ಪ್ರೌಢ ಶಾಲೆ, ನೀಲಗುಂದ

೨೫. ಟಿ.ಎಂ.ಎ.ಇ. ಎಸ್ ಪ್ರೌಢ ಶಾಲೆ, ಹಿರೇಮಗಳೂರು ಸವಣೂರು.

೨೬ ಟಿ.ಎಂ.ಎ.ಇ. ಎಸ್ ಪ್ರೌಢ ಶಾಲೆ, ಧೂಳೆಹೊಳೆ

೨೭ ಟಿ.ಎಂ.ಎ.ಇ. ಎಸ್ ಸಂಸ್ಕೃತ ಮಹಾವಿದ್ಯಾಲಯ, ಹರಪನಹಳ್ಳಿ

೨೮ ಟಿ.ಎಂ.ಎ.ಇ. ಎಸ್ ಸಂಸ್ಕೃತ ಪಾಠ ಶಾಲೆ, ಹರಪನಹಳ್ಳಿ

೨೯. ಟಿ.ಎಂ.ಎ.ಇ. ಎಸ್ ಅಂಗನವಾಡಿ ತರಬೇತಿ ಕೇಂದ್ರ, ಹರಪನಹಳ್ಳಿ

೩೦ ಟಿ.ಎಂ.ಎ.ಇ. ಎಸ್ ಜನರಲ್ ಹಾಸ್ಟೆಲ್, ಹರಪನಹಳ್ಳಿ

೩೧ ಶ್ರೀ ಗುರುಬಸವಸ್ವಾಮಿ ಜನರಲ್ ಹಾಸ್ಟೆಲ್, ಹರಪನಹಳ್ಳಿ

೩೨ ಶ್ರೀ ಚಂದ್ರಮೌಳೇಶ್ವರ ಪ್ರೌಢ ಶಾಲೆ, ಹಂಪಾಪಟ್ಟಣ

೩೩. ಶ್ರೀಮತಿ ಬಸಮ್ಮ ಸ.ಹಿ.ಪ್ರಾ ಶಾಲೆ, ಬಳ್ಳಾರಿ

೧೯೯೯ರಲ್ಲಿ ಹಲವಾರು ಶಿಕ್ಷಣ ಸಂಸ್ಥೆಗಳನ್ನು ದತ್ತುವಾಗಿ ಪಡೆದುಕೊಂಡಿದ್ದಾರೆ. ಅವುಗಳು ಹೀಗಿವೆ. ೧೨ ಹಿರಿಯ ಪ್ರಾರ್ಥಮಿಕ ಶಾಲೆಗಳು, ಮೂರು ಪ್ರೌಢಶಾಲೆಗಳು ಇನ್ನೂ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿ, ಈ ಸಂಸ್ಥೆಗಳ ಕಾಲೇಜುಗಳಲ್ಲಿ ಟಿ. ಸಿ. ಹೆಚ್/ಡಿ. ಇಡಿ. ಬಿ. ಇಡಿ. ವ್ಯಾಸಂಗ ಮಾಡಿದ ಸಹಸ್ರಾರು ವಿದ್ಯಾರ್ಥಿಗಳು ಇಂದು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹಾಗೂ ಫಾರ್ಮಸಿ ಕಾಲೇಜುಗಳಲ್ಲಿ ಅಬ್ಯಾಸ ಮಾಡಿರುವ ಅನೇಕರು ದೇಶ ವಿದೇಶಗಳಲ್ಲಿ ಔಷಧ ಕ್ಷೇತ್ರದಲ್ಲಿ ಗಣನೀಯ ಸಾಧನೆಗೈದಿದ್ದಾರೆ. ಈ ಸಾದನಶೀಲರನ್ನು ಗುರುತಿಸಿ ಪ್ರತಿವರ್ಷದಂತೆ ಈ ವರ್ಷವೂ ಮಾರ್ಚ್ ೧೭ ನೇ ೨೦೦೭ ರಂದು ಹರಪನಹಳ್ಳಿಯಲ್ಲಿ ನಡೆದ ಅಖಿಲಭಾರತ ಅಲುಮಿನ್ ಅಸೋಸಿಯೇಷನ್ ಸಮಾರಂಭದಲ್ಲಿ ಗೌರವಿಸಿದ್ದು ಸ್ಮರಣೀಯ.[೨]

## ಬಾಳೆ ಹೊನ್ನೂರಿನ ಶಾಖಾಮಠ

ತೆಗ್ಗಿನಮಠದ ಪಟ್ಟಾಧಿಕಾರದಿಂದ ಹಿಡಿದು ಉತ್ಸವ, ಹಬ್ಬ ಹರಿದಿನ, ಜಾತ್ರೆ, ಸಾಮೂಹಿಕ ವಿವಾಹ ಏನೇ ನಡೆದರೂ ರಂಭಾಪುರಿ ಜಗದ್ಗುರು ಅವರ ಆಶೀರ್ವಾದ ಪಡೆಯದೇ ಕಾರ್ಯಕ್ರಮಗಳು

ಜರುಗುವುದಿಲ್ಲ. ಅವರ ಕೃಪಾಕಟಾಕ್ಷದಂತೆ ಸ್ವಾಮಿಜಿಗಳು ನಡೆಸಿಕೊಂಡು ಹೋಗುವ ಸಂಪ್ರದಾಯ ಮೊದಲಿನಿಂದಲೂ ಇದೆ.

### ಉಜ್ಜಯಿನಿ ಮಠದೊಂದಿಗಿರುವ ಸಂಬಂಧ

ಪಂಚಪೀಠಗಳಲ್ಲಿ ಒಂದಾದ ೧೦೦೮ ಉಜ್ಜಯಿನಿ ಜಗದ್ಗುರು ಪೀಠ ಹರಪನಹಳ್ಳಿಗೆ ಹತ್ತಿರವಿರುವ ಕಾರಣ ಯಾವುದೇ ಕಾರ್ಯಕ್ರಮ ಜರುಗಿದರೂ ಆ ವಿಷಯವನ್ನು ಜಗದ್ಗುರುಗಳಿಗೆ ತಿಳಿಸಿ ಆಹ್ವಾನ ಮಾಡದೇ ಯಾವ ಕೆಲಸ ಕಾರ್ಯಗಳನ್ನು ನಡೆಸುವುದಿಲ್ಲ ಹಾಗೂ ೧೦೦೮ ಶ್ರೀ, ಉಜ್ಜಯಿನಿ ಜಗದ್ಗುರುಗಳ ಹೆಸರಿನಲ್ಲಿ ಮರುಳಾರಾಧ್ಯ ಪದವಿ ಪೂರ್ವ ಕಾಲೇಜನ್ನು ಸ್ಥಾಪಿಸಿ ಮಾಡಿದ ಕೀರ್ತಿ ಕೂಡಾ ಚಂದ್ರಮೌಳೇಶ್ವರ ಶಿವಾಚಾರ್ಯರಿಗೆ ಸಲ್ಲುತ್ತದೆ. ಈಗ ಸಂಸ್ಥೆ ಕಾಲೇಜನ್ನು ಜಗದ್ಗುರುಗಳಿಗೆ ೧೯೭೩ ರಲ್ಲಿ ಬಿಟ್ಟುಕೊಟ್ಟಿದ್ದಾರೆ.

### ಔಷಧಿಗಳ ಬಳಕೆ

ಬೆಳೆಯುತ್ತಿರುವ ಇಂದಿನ ಕಲುಷಿತ ವಾತಾವರಣದಲ್ಲಿ ಅಲೋಪಥಿಕ್ ಔಷಧಗಳು, ರೋಗಿಯನ್ನು ಗುಣಪಡಿಸಿದ್ದಾಗಿದೆ. ಸೈಡ್ ಎಫೆಕ್ಟ್ ಮತ್ತು ರಿಯಾಕ್ಷನ್ ಗಳಾಗುತ್ತಿರುವುದು ಸಾಮಾನ್ಯ. ಹಾಗಾಗಿ ಜನರು ಹೋಮಿಯೋಪಥಿಕ್‌ಗೆ ಮೊರೆಹೋಗುತ್ತಿದ್ದಾರೆ. ಅದು ನಿಧಾನಗತಿಯಲ್ಲಿದ್ದರೂ ಪ್ರಕೃತಿ ಚಿಕಿತ್ಸೆಯಿಂದ ಗುಣಮುಖ ಹೊಂದಬಹುದೆಂದು ತಿಳಿದುಕೊಳ್ಳಲಾಗಿದೆ. ಹಾಗಾಗಿ ಮಹಾನಗರಗಳಲ್ಲಿ Natural caseಗಳು ಹುಟ್ಟಿಕೊಳ್ಳುತ್ತಿವೆ. ಆ ನಿಟ್ಟಿನಲ್ಲಿ ಟಿ.ಎಂ.ಎ.ಇ. ಸಂಸ್ಥೆಯಲ್ಲಿ ಬಹಳಷ್ಟು ವಿದ್ಯಾರ್ಥಿಗಳು ಹೊರನಾಡಿನಿಂದ ಬಂದು ಅಧ್ಯಯನ ಕೈಗೊಳ್ಳುತ್ತಿದ್ದಾರೆ. ದೇಸಿಯ ಔಷಧಗಳಿಂದ ರೋಗಿಯ ಮೇಲೆ ಯಾವುದೇ ಪರಿಣಾಮ ಬೀರದು ಎಂಬುದನ್ನು ಮನಗಂಡು, ಸಂಸ್ಥೆಯು ನಾಟಿ, ದೇಸಿ ತಳಿಯ ಸಸ್ಯಗಳನ್ನು ಬೆಳೆಸುತ್ತಿರುವುದು ಕಾಣುತ್ತೇವೆ.

"ತೆಗ್ಗಿನಮಠದ ಶಿವಾಚಾರ್ಯರು ಆಯುರ್ವೇದ ಮಹಾವಿದ್ಯಾಲಯಗಳನ್ನು ಸ್ಥಾಪಿಸಿದ್ದಾರೆ.[೧] ಟಿ.ಎಂ.ಎ.ಇ.ಸಂಸ್ಥೆಯ ಆಯುರ್ವೇದ ಕಾಲೇಜ್ ಹೊಸಪೇಟೆ/ಸಂಕ್ಲಾಪುರ ತಾಂಡ.)

ಟಿ.ಎಂ.ಎ.ಇ.ಎಸ್ ಆಯುರ್ವೇದ ಕಾಲೇಜ್‌ಭದ್ರಾವತಿ ಜಿಲ್ಲಾ ಶಿವಮೊಗ್ಗ ಇಲ್ಲಿ ಔಷದಕ್ಕೆ ಬೇಕಾಗಿರುವ ಸಸ್ಯಗಳನ್ನು ಬೆಳೆಸಿದ್ದಾರೆ. ಔಷದಕ್ಕೆ ಬೇಕಾಗಿರುವ ಸಸ್ಯಗಳನ್ನು ಬೆಳೆಸಿ ಬಳಸಿಕೊಂಡು ಹಲವಾರು ಔಷದಿಗಳನ್ನು ತಯಾರು ಮಾಡಿ ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ಭಾರತದಲ್ಲಿರುವ ಮಾನವರಿಗೆ ಮತ್ತು ಪಶುಗಳಿಗೆ ಬರುವ ರೋಗಗಳಿಂದ ಮುಕ್ತರನ್ನಾಗಿ ಮಾಡುತ್ತಾರೆ. ಅಲ್ಲದೇ ವೈದ್ಯಶಾಸ್ತ್ರದಲ್ಲಿ ಹರಪನಹಳ್ಳಿಯ ಅಗ್ರಗಣ್ಯಸ್ಥಾನವನ್ನು ಪಡೆದಿತ್ತು. ಹುಲಿಬೆಂಚಿ ಹಂಚಿಮಠದ ಸೋಮಶೇಖರಯ್ಯನವರು, ಸೋಮಶೇಖರಯ್ಯನ ಕಾಲದಲ್ಲಿ ರಾಜವೈದ್ಯರಾಗಿದ್ದರು.

ಇವರ ಕುಟಂಬವು ಆಯುರ್ವೇದ ಪದ್ಧತಿಯಂತೆ ಜನತೆಗೆ ಔಷದೋಪಾಚಾರ ಮಾಡುತ್ತಿತ್ತು. ಇದರ ವಂಶದವರಾದ ಡಾ.ಎಸ್.ಎಂ.ಚಂದ್ರಶೇಖರಯ್ಯನವರು ಸರ್ಕಾರಿ ವೈದ್ಯಾರಾಗಿದ್ದರೂ ಸಹಿತ

ಆಯುರ್ವೇದ ಪದ್ಧತಿಯನ್ನು ಅನುಸರಿಸಲಿದ್ದಾರೆ. ಕೂದಲು ಉದುರುವ ಮತ್ತು ಜಾಂಡೀಸ್ ರೋಗಗಳಿಗೆ ಅತ್ಯುತ್ತಮ ಔಷದಿಯನ್ನು ಕೊಡುತ್ತಿದ್ದಾರೆ. ಸಚಿವರಾಗಿದ್ದ ದಿವಂಗತ ಬಸವಲಿಂಗಪ್ಪನವರಿಗೆ ಸಹಿತ ಕೂದಲು ಉದುರುವಿಕೆಗೆ ಪರಿಣಾಮಕಾರಿಯಾದ ಚಿಕಿತ್ಸೆಯನ್ನು ಮಾಡಿದ್ದರು.

ಗುರುಪಾದ್ದೇವರಮಠದ ನೀಲಕಂಠಶಾಸ್ತ್ರೀಗಳು ಪ್ರೌಢಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದು, ಉಚಿತ ವೈದ್ಯಸೇವೆ ಸಲ್ಲಿಸುತ್ತಿದ್ದರು. ಬಂಜೆಯವರಿಗೆ ಗರ್ಭಧರಿಸುವ ಔಷದಿಕೊಡುವಲ್ಲಿ ಮತ್ತು ತೊನ್ನು ರೋಗ ನಿವಾರಣೆಯ ಔಷದಿ ಕೊಡುವಲ್ಲಿ ತುಂಬಾ ಹೆಸರುವಾಸಿಯಾಗಿದ್ದರು. ಕಂಪ್ಲಿ ಗ್ರಾಮದ ಮಾರ್ವಾಡಿಯೊಬ್ಬನು ವಿವಾಹವಾಗಿ ಇಪ್ಪತ್ತು ವರ್ಷ ಗತಿಸಿದರೂ ಮಕ್ಕಳಾಗದೇ ಇದ್ದುದರಿಂದ ಇವರ ಔಷಧ ಸ್ವೀಕರಿಸಿ ಪುತ್ರ ಸಂತಾನ ಪಡೆದನು. ಶಾಸ್ತ್ರೀಗಳವರಿಗೆ ಫಜಿನ ರೂಪದಲ್ಲಿ ಎಷ್ಟೇ ಬೇಕಾದರೂ ಹಣ ಕೊಡಲು ಮುಂದಾದಾಗ ಶಾಸ್ತ್ರೀಗಳು ಹಣ ಪಡೆಯಲು ನೀರಾಕರಿಸಿ, ಅದೇ ಹಣವನ್ನು ಧಾನ ಧರ್ಮಕ್ಕೆ ಉಪಯೋಗಿಸಲು ತಿಳಿಸಿದರು. ಆತನು ಪ್ರಾರಂಭಿಸಿದ ಪ್ರೌಡಶಾಲೆಯು ಇಂದು ಅತ್ಯುತ್ತಮ ಶಾಲೆಯಾಗಿ ಕಂಪ್ಲಿಯಲ್ಲಿ ಪ್ರಸಿದ್ಧಿ ಪಡೆದಿದೆ. ಈ ಊರಿನ ತೆಲಿಗಿ ಹರಪನಹಳ್ಳಿ ಮಠದ ಚನ್ನವೀರಯ್ಯನವರು ಹೆರಿಗೆಯು ಸೂಸುತ್ರವಾಗಿ ಜರುಗಲು ಅತುತ್ತಮ ಔಷದಿ ಕೊಡುತ್ತಿದ್ದರು. ಹಿಂದಿನ ಕಾಲದಲ್ಲಿ ಐದು ಆಣೆ ಮತ್ತು ಒಂದು ಬಿಲ್ಲೆಗೆ ಮೂರು ಔಷದದ ಚಿಟಿಗಳನ್ನು ಕೊಡುತ್ತಿದ್ದರು.

ಅವುಗಳ ಸೇವನೆಯಿಂದ ಸುಲಭವಾಗಿ ಮತ್ತು ಸೂಸುತ್ರವಾಗಿ ಹೆರಿಗೆ ಆಗುತ್ತಿತ್ತು. ಬಸ್ಸುಗಳಿಲ್ಲದಿದ್ದರೂ ದೂರದ ಊರುಗಳಿಂದ ಜನರು ಬಂದು ಇವರಿಂದ ಚಿತ್ರಗಳನ್ನು ಪಡೆಯುತ್ತಿದ್ದರು. ಅದೇ ರೀತಿಯಾಗಿ ಹಯಾತ್ ಶಾಸ್ತ್ರಿಗಳು ಹರಪನಹಳ್ಳಿಯ ಜನರಿಗೆ ಉಚಿತ ವೈದ್ಯಕೀಯ ಸೇವೆ ಮಾಡುತ್ತಿದ್ದರು. ಅವರ ಮಗ ಹಷನ್‌ಸಾಹೇಬರು ತಿಳಿಸುವಂತೆ ಕೆಲವು ತೀವ್ರಪರ ರೋಗಗಳಿಗೆ ಅತ್ಯುತ್ತಮ ಔಷದಿ ಕೊಡುತ್ತಿದ್ದರು. ಮುಂಬೈ ಒಬ್ಬ ತರುಣನು ಕ್ಲಿಷ್ಟಕರ ಭೇದಿಯಿಂದ ನರಳುತ್ತಿದ್ದವನು ಇದರಿಂದ ಔಷದಿ ಪಡೆದು ಗುಣ ಹೊಂದಿದವನು ಆ ತರುಣನು ವಿವಾಹವಾಗಬಾರದೆಂದು ನಿಶ್ಚಯಿಸಿದ್ದನು. ಗುಣ ಮುಖವಾಗಿ ವಿವಾಹವಾದ ನಂತರ ತನ್ನ ಕೃತಜ್ಞತೆಯನ್ನು ತಿಳಿಸಲು ಸ್ವತಃ ಹರಪನಹಳ್ಳಿಗೆ ಬಂದು ಇವರ ವೈದ್ಯಶಾಲೆಯ ಔಷದಗಳನ್ನು ದೊಡ್ಡ ಪ್ರಮಾಣದಲ್ಲಿ ತಯಾರಿಸಿಕೊಟ್ಟರೆ ಮುಂಬೈ ಮಾರಾಟ ಮಾಡಿ ಸಾಕಸ್ಟು ಹಣ ಸಂಗ್ರಹಿಸುವುದಾಗಿ ತಿಳಿಸಿದನು. [೨]

ಆದರೆ ಯಾವುದೇ ಲೋಭಕ್ಕೆ ಮರುಳಾಗದೆ ಶಾಸ್ತ್ರಿಗಳು ಆತನ ಕೋರಿಕೆಯನ್ನು ನಿರಾಕರಿಸಿದರು. ಚಿಗಟೇರಿ ಗ್ರಾಮದ ಗುರುಪಾದ ಚನ್ನವೀರ ಸ್ವಾಮಿಯವರ ಮಗ ಗಂಗಾಧರ ಶಾಸ್ತ್ರಿಗಳಲ್ಲದೇ ಅವರ ಮೊಮ್ಮಗ ರುದ್ರಮುನಿ ಸ್ವಾಮಿಯ ಆಯುರ್ವೇದ ವೈದ್ಯ ಪದ್ಧತಿಯನ್ನು ಎತ್ತಿ ಹಿಡಿದಿರುವುದು ಹರ್ಷದಾಯಕ. ಹರಪನಹಳ್ಳಿಯಲ್ಲಿ ಇಂದಿಗೂ ಕಾಮಾಲೆ ರೋಗಕ್ಕೆ ಮಸೂತಿಯವರ ಗುಳಿಗೆ ಎಂದು ಪ್ರಸಿದ್ಧಿಯಾಗಿರುವ ಔಷದಿಯನ್ನು ಕೊಡುತ್ತಿರುವುದು ಹೆಮ್ಮೆಯ ಸಂಗತಿಯಾಗಿದೆ. ವೈದ್ಯಕೀಯ ಕ್ಷೇತ್ರದಲ್ಲಿ ಡಾ. ಸಿ.ಎಸ್ ಹಿರೇಮಠ, ಟಿ ಎಚ್. ಎಂ. ಪಟ್ಟಯ್ಯನವರು ಸಹಿತ ಅಪಾರ ಸೇವೆ ಮಾಡಿ ಹೆಸರುವಾಸಿಯಾಗಿದ್ದರು. ಜಪಾನ್, ಅಮೇರಿಕಾ, ಮೊದಲಾದ ಅತಿ ಹೆಚ್ಚು ಮುಂದುವರೆದ ದೇಶಗಳು

ಇಂದು ೭ ಆಯುರ್ವೇದ ಔಷದಿಗಳ ಚಿಕಿತ್ಸೆಯತ್ತ ಹೆಚ್ಚು ಆಕರ್ಷಿತರಾಗಿದ್ದಾರೆ. ಮತ್ತು ಗಮನ ಕೊಡುತ್ತಿದ್ದಾರೆ ಆದರೆ ನಾವು ಈ ಪದ್ಧತಿಯನ್ನು ನಿರ್ಲಕ್ಷಿಸಿದ್ದೇವೆ. ಔಷದವಿಜ್ಞಾನ ಮಹಾವಿದ್ಯಾಲಯಗಳು ನಿರಂತರ ಸಂಶೋಧನೆ ಮತ್ತು ಸಮುದಾಯದ ಸೇವೆಗೆ ನಿರಂತರವಾಗಿವೆ. ಹಲವಾರು ಆಸ್ಪತ್ರೆಗಳನ್ನು ಔಷಧೀಯ ಕೈಗಾರಿಕೆಗಳನ್ನು ಹೊಂದಿವೆ ಮಾತ್ರವಲ್ಲ ಅನೇಕ ದಕ್ಷ ಉಪನ್ಯಾಸಕರು, ಪ್ರಾಧ್ಯಾಪಕರನ್ನು, ರಾಸಾಯನಿಕ ತಜ್ಞರನ್ನು, ಔಷಧ ತಯಾರಿಕೆ ಉದ್ಯಮಿಗಳನ್ನು ತಯಾರು ಮಾಡಿರುವ ಹೆಗ್ಗಳಿಕೆಗೆ ಈ ಸಂಸ್ಥೆಗಳಿದ್ದು ಕರ್ನಾಟಕ ಮಾತ್ರವಲ್ಲ, ಭಾರತದಾದ್ಯಂತ ಔಷಧ ನಿಯಂತ್ರಕರು ಈ ಸಂಸ್ಥೆಯಲ್ಲಿ ವ್ಯಾಸಾಂಗ ಮಾಡಿದವರಾಗಿರುವದು ಹೆಮ್ಮೆಯ ಸಂಗತಿ. ಈ ಮೂಲಕ ಹರಪನಹಳ್ಳಿ ಪಟ್ಟಣವು ವಿಜ್ಞಾನ ಕ್ಷೇತ್ರದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ನಕಾಶೆಯಲ್ಲಿ ಮಿಂಚುತ್ತಿದೆ. ಹಾಗೂ ಅಲೋಪತಿ ಪದ್ಧತಿಯಲ್ಲಿ ಇದ್ದ ದೋಷಗಳು ಇದರಲ್ಲಿ ಕಂಡುಬರುತ್ತಿಲ್ಲವಾದ್ದರಿಂದ ಮತ್ತು ನಿಸರ್ಗ ಜನ್ಯವಾದಂತಹ ಗಿಡ ಮೂಲಿಕೆಗಳಿಂದ ಯಾವುದೇ ಅಡ್ಡ ಪರಿಣಾಮಗಳುಂಟಾಗದಿರುವದು ಜಗತ್ತಿನ ಗಮನ ಸೆಳೆಯಿತು. ಅಂತರಾಷ್ಟ್ರೀಯ ಮಟ್ಟದಲ್ಲಿ ಪರಿಕ್ಷಿಸಿ ಪ್ರಮಾಣಿಕರಿಸಿದ್ದರಿಂದ ಬಹುತೇಕ ಕಾಣೆಯಾಗಿದ್ದ ಈ ವೈದ್ಯಕೀಯ ಪದ್ದತಿ ಭವಿಷ್ಯದ ವೈದ್ಯಪದ್ಧತಿಯಾಗಿ ಮತ್ತೇ ಮೇಲೆದ್ದು ನಿಂತಿದೆ. ಈ ಹಿನ್ನೆಲೆಯಲ್ಲಿ ಶ್ರೀಗಳವರು ಆಲೋಚಿಸಿ ಹೊಸಪೇಟೆಯಂತಹ ಗ್ರಾಮೀಣ ಪರಿಸರದಲ್ಲಿ ಆಯುರ್ವೇದ ಮಹಾವಿದ್ಯಾಲಯವನ್ನು ತೆರೆದದ್ದು ಅಭಿನಂದನೀಯ ಸಂಗತಿ.ಕರ್ನಾಟಕ ಮಾತ್ರವಲ್ಲ ಭಾರತದ ಮೂಲೆಗಳಿಂದ ಇಲ್ಲಿಗೆ ವಿದ್ಯಾರ್ಥಿಗಳು ಬರುವದು ಹೊಸಪೇಟೆಯ ಹಿರಿಮೆಯೇ ಸರಿ.

## ೫.೧ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಯೋಧರಿಗೆ ಆಶ್ರಯ

"ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹರಪನಹಳ್ಳಿ ತನ್ನದೇ ಆದ ಇತಿಹಾಸ ಹೊಂದಿದೆ. ೧೪೮೮ ರಿಂದ ೧೮೭೯ ರವರೆಗೂ ಹರಪನಹಳ್ಳಿ ಪಾಳೆಗಾರರು ಇಲ್ಲಿ ರಾಜ್ಯಬಾರ ನಡೆಸಿದ್ದು "ಸ್ವರಾಜ್ಯವೇ ನನ್ನ ಜನ್ಮಸಿದ್ಧ ಹಕ್ಕು" ಎಂಬ ಧೋರಣೆ ತಾಳಿದ್ದರು. ತಾಲೂಕಿನ ಅನೇಕ ಯೋಧರು ಸ್ವಾತಂತ್ರ್ಯಕ್ಕಾಗಿ ತಮ್ಮ ಸೇವೆ ಸಮರ್ಪಿಸುವ ಮೂಲಕ ಹರಪನಹಳ್ಳಿಯ ಹಿರಿಮೆ ಗರಿಮೆಯನ್ನು ಹೆಚ್ಚಿಸಿದ್ದಾರೆ.

ರಾಷ್ಟ್ರಪಿತ ಮಹಾತ್ಮ ಗಾಂಧಿ ೧೯೩೩ ರಲ್ಲಿ ಇಲ್ಲಿಗೆ ಭೇಟಿ ನೀಡಿ ಇಲ್ಲಿಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಒಂದು ರಾತ್ರಿ ವಾಸ್ತವ್ಯ ಹೂಡಿದ್ದುಂಟು.ಇಲ್ಲಿಯ ಹಿರಿಯ ನ್ಯಾಯವಾದಿ ಎಚ್. ಎಂ. ವೀರಭದ್ರಯ್ಯನವರು ೧೯೮೮ ರಲ್ಲಿ ಹರಪನಹಳ್ಳಿ ತಾಲೂಕ ಸ್ವಾತಂತ್ರ್ಯ ಹೋರಾಟಗಾರರು ಎಂಬ ಪುಸ್ತಕ ರಚಿಸಿ ಸ್ವಾತಂತ್ರ್ಯ ಸಂಗ್ರಾಮದ ಚಿತ್ರವನ್ನು ಬಿಂಬಿಸಿದ್ದಾರೆ.

ಉಪ್ಪಿನ ಸತ್ಯಾಗ್ರಹ ಭಾರತ ಬಿಟ್ಟು ತೊಲಗಿ ಮದ್ಯಪಾನ ನಿಷೇದ ಮೈಸೂರು ಚಲೋ ಸ್ವದೇಶಿ ಮತ್ತು ಈಚಲಗಿಡ ಕಡಿಯುವ ಚಳುವಳಿಯಲ್ಲಿ ಇಲ್ಲಿನ ಹೋರಾಟಗಾರರ ಸೇವೆ ಅವಿಸ್ಮರಣೀಯ.

ಸೆರೆವಾಸ ಸೇರಿದಂತೆ ವಿವಿಧ ಶಿಕ್ಷೆಯನ್ನು ಅನುಭವಿಸಿದ್ದಾರೆ. ಇವರಲ್ಲಿ ಹಲವಾಗಲು ಗ್ರಾಮದಲ್ಲಿ ಜನಿಸಿದ ಮಾಜಿಮುಖ್ಯಮಂತ್ರಿ ದಿ. ಶ್ರೀ ಎಸ್ ನಿಜಲಿಂಗಪ್ಪ ಅವರು ಹರಪನಹಳ್ಳಿಯ ಮೊದಲ ಶಾಸಕರು ೧೯೫೨–೫೭ ಶಾಸಕ ದಿ ಇಜಾರಿ ಶಿರಸಪ್ಪ (೧೯೬೨–೬೭) ಸೇರಿದ್ದಾರೆ. ತೆಲಿಗಿ ಹಿರೇಮೇಗಳಗೇರಿ, ಕುಂಚೂರು, ಹಲವಾಗಲು, ಅರಸನಾಳು, ಬೆಣ್ಣಿಹಳ್ಳಿ,ಚಿಗಟೇರಿ, ಶೃಂಗಾರತೋಟ, ಚಿರಸ್ತಹಳ್ಳಿ, ಮಾದಿಹಳ್ಳಿ, ಪುಣಬಘಟ್ಟ, ತೌಡೂರುತಾಂಡ, ಸೇರಿದಂತೆ ವಿವಿದ ಗ್ರಾಮದವರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರಾಗಿದ್ದಾರೆ.

ಸ್ವಾತಂತ್ರ್ಯ ಚಳುವಳಿ ಮತ್ತು ೧೯೩೦ ರ ಕಾಯ್ದೆಯ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಪಾಲ್ಗೊಂಡು ಹೋರಾಟ ಮಾಡಿದವರು. ಇಜಾರಿ ವಸುಪಾಲಪ್ಪ. ಇಜಾರಿ ವಸುಪಾಲಪ್ಪ. ಮುದುಗಲ್ ನಾಗಪ್ಪ ಕಟ್ಟಿ ಸೇತುರಾಮಚಾರ್. ಎಚ್.ಎಂ. ಚಂದ್ರಯ್ಯ ಟಿ.ಬಿ.ಕೇಶವರಾಜ್ ಕುಂಚೂರಿನ ಎನ್ ಸಿದ್ಧಪ್ಪ ಅರಸನಾಳ ಕೆ ವೆಂಕಾರೆಡ್ಡಿ ಮಾದಿಹಳ್ಳಿ ಪಾಟೀಲ ರೇವನಗೌಡ್ರು ಪಿ.ಎಲ್. ಪೋಮ್ಯನಾಯ್ಕ. ಕೆ. ಕೊಟ್ರಗೌಡ್ರ ಬೆಣ್ಣಿಹಳ್ಳಿ ಚನ್ನನಗೌಡ ಮೊದಲಾದವರು ೧೯೪೨–೪೪ ರಲ್ಲಿ ೩ ವರ್ಷ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಪಾಲ್ಗೊಂಡು ವೆಲ್ಲೂರು ತಂಜಾವೂರು ಹಾಗೂ ಮದುರೈ ಗಳಲ್ಲಿ ಸೆರವಾಸ ಅನುಭವಿಸಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಹೋರಾಡುವಾಗ ಬ್ರೀಟಿಷರನ್ನು ಭಾರತದಿಂದ ಬಿಟ್ಟು ಕಳಿಸುವುದಕ್ಕಾಗಿ ವೀರಗೀತೆಗಳನ್ನು ಹೀಗೆ ವ್ಯಕ್ತಪಡಿಸುತ್ತಿದ್ದರು.

> ಬಣ್ಣಗುಂದಿ ದಿಕ್ಕೆಟ್ಟು ಕೆಂಚನಗೌಡ, ಬೆಣ್ಣಿಹಳ್ಳಿಗೋಡಿ ಬಂದಾ ।
> ಭೀಮರಾಯಗ್ಹೇಳುತ್ತಾನೆ ಶಿವ ಶಿವನೆಂದ /ಸಾವಿನ ಕಾಲ ನಮಗೆ ಬಂತೆಂದ !
> ಆಗ ವರ್ತಮಾನ ಇತ್ತೆಂದು ತಿಳಿಸಿದ ಕಣ್ ತುಂಬಾ ನೀರು ತಂದಾ ।
> ಕೇಳುತ ಭೀಮರಾಯ ನಮ್ಮ ಹಣೆಬರ ಅವರ ಅಳಿವುಗಾಲ ಇನ್ನು
> ನಿನಗೆ ಭಯ ಬೇಡೆಂದ ॥ ೪ ॥

> "ಹೆದರಬ್ಯಾಡಿರಿ ನೀವು ಯಾರ‍್ಯಾರು–ಹಿಂದಕ
> ಸರಿದು ಆಗಬ್ಯಾಡ್ರಿ ಸುಮಾರ –ಸ್ವತಂತ್ರ್ಯ
> ಸಲುವಾಗಿ ಹೋರಾಡಿ ಉಳಿಸಿರಿ ಹೆಸರಾ"

ಹಿಂದೂ ಮುಂದು ನೋಡದೇ ಸ್ವಾತಂತ್ರ್ಯ ಬರುವವರೆಗೂ ನಾವು ಬಿಡಬಾರದು " ಮಾಡು ಇಲ್ಲವೇ ಮಡಿ" ಎನ್ನುವ ಹಾಗೆ ಹೋರಾಟ ಮಾಡಿ ಗುಲಾಮಗಿರಿಯಿಂದ ಮುಕ್ತಿ ಪಡೆಯೋಣ ಎನ್ನುತ್ತಿದ್ದರು. ಕೊಪ್ಪಳ ರುದ್ರಪ್ಪ ಬಣಕಾರ ಹೊನ್ನಮ್ಮ ಮುಂಡರಗಿ ಭೀಮರಾಯರು, ಎಚ್.ಎಂ. ಸಿದ್ಧಲಿಂಗಯ್ಯ ಸೆಟ್ರ ಪರಮೇಶ್ವರಪ್ಪ ಕಂಚಿಕೆರೆ ಶ್ಯಾನಭೋಗರು ಶೃಂಗಾರತೋಟದ ಗುರುಸಿದ್ಧಯ್ಯನವರು ಎಚ್.ಎಂ.ವೀರಭದ್ರಯ್ಯ, ತೆಗ್ಗಿನಮಠದ ಪಂಚಾಕ್ಷರಯ್ಯ, ಪಾಟೀಲ್ ಸಿದ್ದನಗೌಡರು ಹಯಾತ್ ಶಾಸ್ತ್ರಿಗಳು ಮತ್ತು ಅವರ ಮಗ ಕರೀಮಸಾಹೇಬ ಹಣ್ಣು ಮಾರುವ ಬುಡೇನಸಾಹೇಬ ಇಜಂತಕರ್

ಸತ್ಯನಾರಾಯಣರಾಯ ಎಂ.ಬಾದನಹಟ್ಟಿ ಹನುಮಂತರಾಯ ಚಿಗಟೇರಿಯ ಮುದೇನೂರು ಕೊಟ್ರಪ್ಪ, ರಾಯಪ್ಪ ಮತ್ತಿಹಳ್ಳಿ ಟಿ.ಕೆ.ಎಂ.ಕೊಟ್ರಯ್ಯ ಹಾಲಪ್ಪ ತೆಲಿಗಿ ಇವರೆಲ್ಲರೂ ಸ್ವಾತಂತ್ರ್ಯ ಚಳುವಳಿಗಳಲ್ಲಿ ಭಾಗವಹಿಸಿ ಸೆರವಾಸ ಅನುಭವಿಸಿದ್ದಾರೆ. ಅಷ್ಟೇ ಅಲ್ಲ ಧಾರವಾಡ ಹುಬ್ಬಳ್ಳಿ ಬೆಳಗಾಂವ, ಬೈಲಹೊಂಗಲ ಬೇರೆ ಬೇರೆ ಪ್ರದೇಶಗಳಿಂದ ಬಂದಂತಹ ಸ್ವಾತಂತ್ರ್ಯ ಹೋರಾಟಗಾರರಿಗೆ ತೆಗ್ಗಿನಮಠ ಅನ್ನ ಆಶ್ರಯ ಕೊಟ್ಟು ಸಾಕಿ ಸಲುಹಿದ ಕೀರ್ತಿ ಈ ಮಠಕ್ಕೆ ಇದೆ. – ೪

## ೫.೨ ಜ್ಯೋತಿಷ್ಯಶಾಸ್ತ್ರ

ಶೂದ್ರರಿಗೆ ವಿದ್ಯಾಬ್ಯಾಸ ನಿಷಿದ್ದವೆನ್ನುವ ಕಾಲದಲ್ಲಿ ಹರಪನಹಳ್ಳಿಯ ಖ್ಯಾತ "ಜ್ಯೋತಿಷಿ ತೆಲಿಗಿಯ ಹರಪನಹಳ್ಳಿ ಮಠದ ಹೊಳೆ ಬಸವಶಾಸ್ತ್ರಿಗಳು ತಮ್ಮ ಗುಮಾಸ್ತನಾಗಿದ್ದ ಹಯಾತ್ ಸಾಹೇಬರಿಗೆ ಜ್ಯೋತಿಷ್ಯ ಪಾಠ ಕಲಿಸಿದರು. ಇವರಿಂದ ಜ್ಯೋತಿಷ್ಯ ವೈದ್ಯಶಾಸ್ತ್ರಗಳನ್ನು ಕಲಿತ ಹಯಾತ್ ಸಾಹೇಬರು ಚಂದ್ರಶೇಖರಸ್ವಾಮಿಗಳ ಆಶಿರ್ವಾದದಿಂದ ತಮ್ಮದೇ ಆದ ಭಾರತ ಧರ್ಮಾರ್ಥ ಜ್ಯೋತೀಷ್ಯ ವೈಧ್ಯ ಪಾಠಶಾಲೆಯನ್ನು ೧೯೨೨ ರಲ್ಲಿ ಪ್ರಾರಂಭಿಸಿದರು.

ವೇದಗಳಲ್ಲಿ ಹೇಳಲ್ಪಟ್ಟ ಶಾಸ್ತ್ರಗಳಲ್ಲಿ ಜ್ಯೋತಿಷ್ಯಶಾಸ್ತ್ರವು ಮಹತ್ವದ್ದಾಗಿದೆ. "ವೇದಸ್ಯ ಚಕ್ಷು! ಕೀಲಶಾಸ್ತ್ರ ಮೆಂತತ" ಹೇಗೆ ಮನುಷ್ಯನಿಗೆ ಪಂಚೇಂದ್ರೀಯಗಳಲ್ಲಿ ಕಣ್ಣು, ಮೂಗು ಎಷ್ಟು ಪ್ರಧಾನವಾದವುಗಳೋ ಅದೇ ರೀತಿ ಪಂಗಡಶಾಸ್ತ್ರ (ಶಿಕ್ಷಾ,ಕಲ್ಪ, ವ್ಯಾಕರಣ, ನಿರುಕ್ತ ಛಂದ, ಜ್ಯೋತಿಷ್ಯ) ದಲ್ಲಿ ಜ್ಯೋತಿಷ್ಯಶಾಸ್ತ್ರವು ನೇತ್ರ ಸ್ಥಾನದಲ್ಲಿದೆ. ಈ ಜ್ಯೋತಿಷ್ಯಶಾಸ್ತ್ರ ವಿದ್ಯಯನ್ನು ತೆಗ್ಗಿನಮಠದಲ್ಲಿ ಜ್ಯೋತಿಷ್ಯಶಾಸ್ತ್ರ ನಿಮಣರಾದ ಶ್ರೀ ಚನ್ನವೀರಪ್ಪಯ್ಯಶಾಸ್ತ್ರಿಗಳು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು ಸಂಸ್ಕೃತ ವೈದಿಕದಲ್ಲಿ ಪಂಡಿತರಾಗಿ ಶ್ರೀ ಬಸವಲಿಂಗಶಾಸ್ತ್ರಿಗಳು ತಮ್ಮ ವಿದ್ಯೆಯನ್ನು ಶಿಷ್ಯರಿಗೆ ದಾರೆ ಎರೆಯುತ್ತಿದ್ದರು. ಇಲ್ಲಿ ಅಭ್ಯಾಸ ಮಾಡಿದವರು ಇಂದ್ರ ಪ್ರಸಿದ್ಧ ಜ್ಯೋತಿಷ್ಯ ವೈದಿಕ ವಿದ್ವಾಂಸರಾಗಿದ್ದಾರೆ. ದೂರದ ಬೀದರ್, ತುಮಕುರು, ಚಿತ್ರದುರ್ಗ ಧಾರವಾಡ ಜಿಲ್ಲೆ ಗಳಿಂದಲೂ ಕಲಿಯಲು ತೆಗ್ಗಿನಮಠಕ್ಕೆ ಬರುತ್ತಿದ್ದರು.ಈ ಪಾಠಶಾಲೆಯಲ್ಲಿ ಕಲಿತು ಪ್ರಸಿದ್ದರಾದವರು ಹಲವಾರು ಪಂಡಿತರು ಅವರಲ್ಲಿ ಕೆಲವರನ್ನು ಹೆಸರಿಸಬಹುದಾದರೆ ಗದುಗಿನ ಶ್ರೀತೋಟಪ್ಪಯ್ಯ ಶಾಸ್ತ್ರಿಗಳು, ಮಹಾಗಾಂವ್‌ನ ಶ್ರೀರುದ್ರರಾದ್ಯ ಶಾಸ್ತ್ರಿಗಳು, ದಾವಣಗೆರೆಯ ಶ್ರೀವಾನಂದ ಶಾಸ್ತ್ರಿಗಳು, ನಂದ್ಯಾಲದ ಶ್ರೀಕೊಟ್ರಪ್ಪಯ್ಯ ಶಾಸ್ತ್ರಿಗಳು ಇದ್ದಾರೆ.

ತೆಗ್ಗಿನಮಠದ ಜ್ಯೋತಿಷ್ಯ ಪಾಠಶಾಲೆಯ ಕೀರ್ತಿ ನಾಡಿನಾದ್ಯಂತ ಪಸರಿಸಿತು. ಇಲ್ಲಿ ಕಲಿತ ವಿದ್ಯಾರ್ಥಿಗಳು ಪ್ರಖ್ಯಾತ ಜ್ಯೋತಿಷ್ಯ ಪಂಡಿತರಾಗಿದ್ದು ಕಂಡು ಕೇಳಿ ಉಳಿದವರು, ಕಲಿತರೆ ಹರಪನಹಳ್ಳಿಯವರು ಕಲಿಯಬೇಕೆಂದು ಇಚ್ಚೆ ಪಟ್ಟರು ಹರಪನಹಳ್ಳಿಯವರೇ ಆದ ಶ್ರೀಹಯಾತ್ ಶಾಸ್ತ್ರಿಗಳಿಗೆ ತೆಗ್ಗಿನಮಠದ ಸಂಪರ್ಕವಿತ್ತು, ಇಲ್ಲಿ ನಡೆಯುತ್ತಿದ್ದ ಜ್ಯೋತಿಷ್ಯ ಪಾಠಗಳನ್ನು ಸದಾ ಕೇಳುತ್ತಿದ್ದರು. ಬರು ಬರುತ್ತಾ ಶ್ರವಣದ ಮೇಲೆ ಈ ವಿದ್ಯೆಯನ್ನು ಕಲಿತರು ತಾವು ವಿದ್ಯೆಯನ್ನು ದಾನ ಮಾಡಬೇಕು ಎಂಬ ಮಹಾದಾಸೆಯನ್ನು ಹೊಂದಿದ್ದ, ಹಯಾತ್ ಶಾಸ್ತ್ರಿಗಳಿಗೆ ಒಳ್ಳೆಯ ಅವಕಾಶ ಒದಗಿ ಬಂತು ಮೇಗಳಪೇಟೆ ಶ್ರೀ ಕೆಂಪೇಶ್ವರ ಮಠದ ಹಿಂಬಾಗದಲ್ಲಿ ಒಂದು ಚಿಕ್ಕದಾದ ಮಠದಲ್ಲಿ ಒಂದು ವೈದಿಕ ಧರ್ಮಾರ್ಥ ಪಾಠಶಾಲೆಯನ್ನು ಸ್ಥಾಪಿಸಿದರು.

ಶ್ರೀಯುತ ಬಿ.ಹಯಾತ್‌ಸಾಹೇಬ ಶಾಸ್ತ್ರಿಗಳು ಧರ್ಮಾರ್ಥ ಪಾಠಶಾಲೆ ಆರಂಭಿಸಿದ ವಿಷಯ ತಿಳಿದು ಸಂತೋಷವಾಗಿ ಶ್ರೀ ಚಂದ್ರಶೇಖರ ಶಾಸ್ತ್ರಿಗಳು ತಮ್ಮ ಮಠಕ್ಕೆ ಶ್ರೀಯವರನ್ನು ಕರೆಯಿಸಿ "ನೀವು ಮಾಡುವ ಕಾರ್ಯ ಶಿವ ಮೆಚ್ಚುವಂಥದ್ದು" ಕಲಿಯಲಿಕ್ಕೆ ಎಷ್ಟೆ ವಟುಗಳು ಬರಲಿ ನಮ್ಮ ಮಠದಲ್ಲಿ ಅವರಿಗೆ ಅವರಿಗೆ ಪ್ರಸಾದ ವ್ಯವಸ್ಥೆ ಇರುತ್ತದೆ. ನೀವು ಹರಿಪುರ ತೆಗ್ಗಿನಮಠದ ಸಿದ್ಧಾಂತ ಪಂಚಾಂಗ ಪ್ರಕಟನಾಕಾರ್ಯವನ್ನು ಮುಂದುವರೆಸಿಕೊಂಡು ಜ್ಯೋತಿಷ್ಯ ಪಾಠಶಾಲೆಯನ್ನು ನಡೆಸಿಕೊಂಡು ಹೋಗಿರಿ ಒಳ್ಳೆಯದಾಗುತ್ತದೆ ಎಂದು ಆಶೀರ್ವದಿಸಿದರು. ಶ್ರೀಗಳವರ ಆಶೀರ್ವಾದ ಶ್ರೀಹಯಾತ್‌ಶಾಸ್ತ್ರಿಗಳಿಗೆ ಮತ್ತಷ್ಟು ಬಲ ಬಂದಿತು ಈ ಪಾಠಶಾಲೆಯಲ್ಲಿ ಕಲಿಯಲು ದೂರ ದೂರದಿಂದ ಬರುವ ವಟುಗಳ ಸಂಖ್ಯೆ ವರ್ಷ ವರ್ಷವೂ ಅಧಿಕವಾಯಿತು. ಕಲಿಯಲು ಬಂದ ವೀರಶೈವ ,ಜೈನ, ಮುಸ್ಲಿಮ್, ವಟುಗಳೆಲ್ಲರಿಗೂ ದಾಸೋಹ ಮಠದಲ್ಲಿ ಪ್ರಸಾದ ದೊರೆಯುತ್ತಿತ್ತು. ಈ ಪಾಠಶಾಲೆಗೆ ಶ್ರೀ ಗುರುಪಾದ್ದೇವರಮಠದ ಶ್ರೀ ನೀಲಕಂಠ ಶಾಸ್ತ್ರಿಗಳು ಹಾಗೂ ಶ್ರೀ ಚನ್ನವೀರ ಶಾಸ್ತ್ರಿಗಳು ರಾಜಶೇಖರಯ್ಯಶಾಸ್ತ್ರಿಗಳು ಇವರೆಲ್ಲರೂ ಸಹಾಯ ಸಹಕಾರ ನೀಡಿದರು.

## ೫.೩ ಹರಪುರಿ ತೆಗ್ಗಿನಮಠದ ಸಿದ್ಧಾಂತಿ ಪಂಚಾಂಗ

ಸಮಾಜದಲ್ಲಿ ಜನರಿಗೆ ಹಬ್ಬ ಹರಿದಿನ ತಿಥಿ, ವಾರ, ನಕ್ಷತ್ರ, ಕರಣ, ಯೋಗ, ಈ ಪಂಚ ಅಂಗಗಳಿಂದ ಕೂಡಿದ್ದ ಪಂಚಾಂಗ ಈ ಮಠದಿಂದ ಪ್ರಕಟವಾಗುತ್ತಿದ್ದ "ಹರಪುರಿ ತೆಗ್ಗಿನಮಠದ ಸಿದ್ಧಾಂತಿ ಪಂಚಾಂಗ" ಬಹು ಬೇಗನೆ ಪ್ರಸಿದ್ಧಿ ಪಡೆಯಿತು. ಜ್ಯೋತಿಷ್ಯ ಪಂಡಿತರಾಗಿದ್ದ ಶ್ರೀಚನ್ನವೀರಶಾಸ್ತ್ರಿಗಳು ೧೯೧೫ ರಿಂದ ೧೯೨೫ ರವರೆಗೂ ಈ ಪಂಚಾಂಗ ಪ್ರಕಟಣಾ ಕಾರ್ಯ ನಿರ್ವಹಿಸಿಕೊಂಡು ಬಂದರು. ನಂತರ ಈ ಕಾರ್ಯವನ್ನು ಹಯಾತ್ ಶಾಸ್ತ್ರಿಗಳು ಮುಂದುವರೆಸಿಕೊಂಡು ಬಂದರು. ತೆಗ್ಗಿನಮಠದ ಪಂಚಾಂಗ ಮತ್ತು ಒಂಟಿಕೊಪ್ಪಲದ ಪಂಚಾಂಗ ಶ್ರೇಷ್ಠ ಪಂಚಾಂಗಗಳೆಂದು ಜನ ಬಾವಿಸಿದ್ದರು. ಈ ಪಂಚಾಂಗಗಳಿಗೆ ಬಹು ಬೇಡಿಕೆ ಇರುತ್ತಿತ್ತು.

ಶ್ರೀಹಯಾತ್ ಸಾಹೇಬ್ ಶಾಸ್ತ್ರಿಗಳು ಆರಭಿಸಿದ ಭಾರತ ಜ್ಯೋತಿಷ್ಯ ವೈದಿಕ ಧರ್ಮಾರ್ಥ ಪಾಠಶಾಲೆಯ ಮಹಾ ಪೋಷಕರಾಗಿ ಹಿಂದೂ-ಮುಸಲ್ಮಾನ ಭಾವ್ಯಕ್ಯತೆ ಸಾದಿಸಿಕೊಂಡು ಬಂದ ಶ್ರೇಯಸ್ಸು ಶ್ರೀ ಚಂದ್ರಶೇಖರ ಶಿವಾಚಾರ್ಯರಿಗೆ ಸಲ್ಲುತ್ತದೆ. ಜಂಗಮ ಪ್ರೇಮಿಗಳಾಗಿದ್ದ ಹಯಾತ್ ಸಾಹೇಬ್ ಶಾಸ್ತ್ರಿಗಳು ಸಹ ಶ್ರೀಗಳವರ ವಿಷಯದಲ್ಲಿ ಭಕ್ತಿ ವಿಶ್ವಾಸದಿಂದ ನಡೆದುಕೊಳ್ಳುತ್ತಿದ್ದರು. ತೆಗ್ಗಿನ ಮಠದ ಪಂಚಾಂಗವು ಪ್ರತಿವರ್ಷವೂ ಪ್ರಕಟವಾಗುತ್ತಾ ಬಂದಿರುವುದು ಒಂದು ದೊಡ್ಡ ಸಾದನೆಯಾಗಿದೆ."

## ಧಾರ್ಮಿಕ ಕ್ಷೇತ್ರದಲ್ಲಿ ಶ್ರೀಗಳವರ ಪಾತ್ರ

"ಶ್ರೀ ಜಗದ್ಗುರು ಪಂಚಾಚಾರ್ಯ ಮಾನವಧರ್ಮ ಸಂಸ್ಥೆಯಲ್ಲಿ ಕಾರ್ಯದರ್ಶಿಯಾಗಿ ಸೇವೆ ಈಗ ಅಖಿಲ ಭಾರತ ಶಿವಾಚಾರ್ಯ ಪಂಥಕ್ಕೆ ಗೌರವ ಉಪಾಧ್ಯಕ್ಷರುಕೊಲ್ಲಿಪಾಕಿ ಪುಣ್ಯಕ್ಷೇತ್ರದ ಟ್ರಸ್ಟಿನ ಸದಸ್ಯರು ಆಗಿದ್ದಾರೆ.

## ೫.೪ ಮಠದ ಮಹಾದಾಶಯಗಳು

ಧಾರ್ಮಿಕ ಜಾಗೃತಿಯನ್ನುಂಟು ಮಾಡಿ ಸಮಾಜವನ್ನು ಸಂಘಟಿಸಿ ಸರಿ ದಿಕ್ಕಿನತ್ತ ಮುನ್ನಡೆಸುವುದು. ಸಮಾಜದ ನೈತಿಕ ಮಟ್ಟ ಸುಧಾರಿಸುವುದು. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪರಂಪರೆಗಳನ್ನು ಉಳಿಸಿ ಬೆಳೆಸುವುದು. ಕೀರ್ತನ, ಸಂಗೀತ, ಕಲೆಗಳಿಂದ ಬದುಕಿನ ಸೌಂದರ್ಯೋಪಾಸನೆಗೆ ಒತ್ತು ಕೊಡುವುದು. ಜಾತಿ ನಿರಪೇಕ್ಷತೆಯ ವಿದ್ಯಾದಾನ ಮಾಡುವುದು. ವೃತ್ತಿಪರ ವಿದ್ಯೆಯಿಂದ ನಿರುದ್ಯೋಗಕ್ಕೆ ವಿದಾಯ ಆಗುವಂತೆ ಪ್ರೇರೆಪಿಸುವುದು. ರಾಷ್ಟ್ರೀಯತೆಯನ್ನು ಬೆಳೆಸಿ ಸತ್ಪ್ರಜೆಗಳನ್ನು ರೂಪಿಸುವುದು ಸಾಹಿತ್ಯ ಪೋಷಕವಾಗುವ ಗ್ರಂಥಗಳಪ್ರಕಟಣೆ ಗುಡಿ ಗುಂಡಾರ ಹಾಗೂ ಮಠಗಳ ಜೀರ್ಣೋದ್ಧಾರ ಕನ್ನಡ ಭಾಷಾ ಸಾಹಿತ್ಯ ಹಾಗೂ (ಜಾನಪದ) ಸಂಸ್ಕೃತಿಗಳಿಗೆ ಪೋಷಣೆ ನೀಡುವುದು.[೬]

## ೫.೫ ತೆಗ್ಗಿನ ಮಠದ ಕೊಡುಗೆ

"ತೆಗ್ಗಿನಮಠದ ಶ್ರೀಗಳವರು ತತ್ವಶಾಸ್ತ್ರದಲಿ ಸ್ನಾತಕೋತ್ತರ ಪದವಿಯನ್ನು ಪಡೆದವರು ಅವರಿಗೆ ಸಾಮಾಜಿಕ ಪರಿವರ್ತನೆಯ ಅರಿವು ಮೂರ್ತಸ್ವರೂಪವನ್ನು ಪಡೆದವರು ಅವರಿಗೆ ಸಾಮಾಜಿಕ ಪರಿವರ್ತನೆಯ ಅರಿವು ಮೂರ್ತಸ್ವರೂಪವನ್ನು ಪಡೆದುಕೊಂಡದ್ದು ಅವರ ವಯಸ್ಸಿನ ಮೂರು ನಾಲ್ಕು ದಶಕಗಳ ಅವಧಿಯಲ್ಲಿ ಮಠವನ್ನು ಸಮಾಜಮುಖಿಯಾಗಿ ಮಾಡುವ ಪ್ರಯತ್ನ ಅವರ ಮುಂದಿರುವ ಬಹು ದೊಡ್ಡ ಉದ್ದೇಶವೇ ಆಗಿದೆ. ಸಾಮಾಜಿಕ ಪರಿವರ್ತನೆಯು ದೇಶದ ಪ್ರಗತಿಗೆ ಪೂರಕ ಎನ್ನುವ ಧ್ಯೇಯ ಮಂತ್ರವನ್ನಿಟ್ಟುಕೊಂಡು ಸಮುದಾಯದ ಶಿಕ್ಷಣ ,ಸಾಮಾಜಿಕ ಆರೋಗ್ಯ, ಸಮಾಜದ ವಿವಿಧ ರಂಗಗಳಲ್ಲಿ ಅಭಿವೃದ್ಧಿಗೆ ಕಟಿಬದ್ಧರಾಗಿ ನಿಂತವರಾಗಿದ್ದಾರೆ. ಹಾಗಾಗಿ ಹತ್ತು ಹಲವು ಆರೋಗ್ಯ ಕೇಂದ್ರಗಳನ್ನು ಜನತೆಯ ಕಲ್ಯಾಣಕ್ಕಾಗಿ ತೆರೆದಿದ್ದಾರೆ. ಶಿಕ್ಷಣ ಸಂಸ್ಥೆಗಳನ್ನು ಸಮುದಾಯದ ಅನಕ್ಷರತೆಯನ್ನು ತೊರೆದು ಹಾಕಲು ಅನವರತ ಪ್ರಯತ್ನಿಸಿದ್ದಾರೆ. ಮಾನವನ ಅಂತರಂಗದಲ್ಲಿ ಎದ್ದ ಕ್ಲೇಶಗಳನ್ನು ಕಳೆಯಲು ಆಧ್ಯಾತ್ಮಿಕ ಸಭೆ, ಸಮಾರಂಭ ಶಿಭಿರಗಳನ್ನು ಏರ್ಪಡಿಸಿದ್ದಾರೆ. ಜಾತಿ ವಿನಾಶದ ಪ್ರಯತ್ನದಲ್ಲಿ ಅಂತರ್ ಜಾತಿಯ ವಿವಾಹವನ್ನು ಪ್ರೋತ್ಸಾಹಿಸಿದ್ದಾರೆ.

## ಸಂತ್ರಸ್ತರಿಗೆ ದೇಣಿಗೆ ಸಂಗ್ರಹ

೨೦೦೫ ರಲ್ಲಿ ನಡೆದ ಕಾರ್ಗಿಲ್ ಯುದ್ಧ ನಿರಾಶ್ರಿತರಿಗೆ ಶ್ರೀಗಳು ಉದಾರವಾಗಿ ದಾನವನ್ನು ಕೊಡುವುದರ ಜೊತೆಗೆ ತಾವೇ ಸ್ವತ: ಹಳ್ಳಿ ಹಾಗೂ ಪಟ್ಟಣಗಳಲ್ಲಿರುವ ಬಟ್ಟೆ ಅಂಗಡಿಗಳು, ಹಲವಾರು ಕಛೇರಿಗಳು ಕಿರಾಣಿ ಅಂಗಡಿಗಳು ಇನ್ನು ಹಲವಾರು ವ್ಯಾಪಾರಸ್ಥರಿಂದ ಮತ್ತು ಹರಪನಹಳ್ಳಿಯಲ್ಲಿರುವ ಸ್ಥಳೀಯ ಪ್ರವಾಸಿ ಮಂದಿರದಿಂದ ಬೆಳಿಗ್ಗೆ ೧೦ :೦೦ ಗಂಟೆಗೆ ಪ್ರಾರಂಭವಾದ ಪಾದಯಾತ್ರೆ ಪ್ರಮುಖ ಬೀದಿಗಳಲ್ಲಿರುವ ಮಳಿಗೆಗಳಲ್ಲಿ ಹಾಗೂ ಸಂತೆಗಳಲ್ಲಿ ಸಂಚರಿಸಿ, ಹಾಗೂ ತಮ್ಮ ಸಂಸ್ಥೆಯಲ್ಲಿ ದುಡಿಯುವ ನೌಕರರ ಮನವೊಲಿಸಿ, ಕಾರ್ಗಿಲ್ ಸಂತ್ರಸ್ಥರಿಗೆ ಪರಿಹಾರ ಧನವನ್ನು ಬಿಕ್ಷೆಯ

ರೂಪದಲ್ಲಿ ಹೀಗೆ ಸಂಗ್ರಹಿಸಿ ಪರಿಹಾರ ದನವನ್ನು ಕಾರ್ಗಿಲ್ ಸಂತ್ರಸ್ಥರಿಗೆ ಕಳಿಸಿಕೊಡುವಲ್ಲಿ ಪ್ರಯತ್ನಿಸಿದರು.

ವಿಜ್ಞಾನ ಎಷ್ಟೇ ಮುಂದುವರೆದರೂ ಸೃಷ್ಟಿಯ ರಹಸ್ಯವನ್ನು ಬೇದಿಸುವಲ್ಲಿ ನಿಸರ್ಗ ತನ್ನೆಲ್ಲಾ ಗುಟ್ಟನ್ನು ಇನ್ನೂ ಬಿಟ್ಟುಕೊಟ್ಟಿಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳದೇ ವಿಧಿಯಿಲ್ಲ. ಪ್ರಕೃತಿ ಕುರಿತು ಪ್ರರ್ಥಿಸುವುದೊಂದೆ ದಾರಿ ಸರ್ವ ಜೀವರಾಶಿಗಳನ್ನು ತನ್ನ ಒಡಲಿನಿಂದ ರಕ್ಷಿಸಲೇ ಎಂದು ಅಳಿದುಳಿದ ಮಾನವ ಸಂಕುಲವನ್ನು ಜಲ ಪ್ರಳಯದಿಂದ ಮುದುಡಿದ ಮನೆಗಳಿಗೆ ಸ್ಪಂದಿಸುವದು ನಮ್ಮ ಆದ್ಯ ಕರ್ತವ್ಯಗಳಲ್ಲಿ ಒಂದು. ಅದೇ ಭಾರಯತೀಯ ಸಂಸ್ಕೃತಿ.

ಸಾಂತ್ವನದ ಮೂಲಕ ಆರ್ಥಿಕ ಸಹಾಯವನ್ನು ನೀಡುವಲ್ಲಿ ನೌಕರ ವರ್ಗದವರು ಒಂದು ದಿನದ ವೇತನ ವಿದ್ಯಾರ್ಥಿಗಳಿಂದ ಮತ್ತು ಪೋಷಕವರ್ಗದವರಿಂದ ಹಾಗೂ ಊರಿನ ಪ್ರಮುಖ ದನಿಗಳನ್ನು ಸಂಪರ್ಕಿಸಿ "ಸುನಾಮಿ ರಿಲೀಫ್ ಫಂಡ್" ಗೆ ನೀಡುವ ಮೊತ್ತವನ್ನು ಡಿ.ಡಿ. ಮೂಲಕ ಸಂಸ್ಥೆಯ ಕಾರ್ಯಲಯಕ್ಕೆ ಸಲ್ಲಿಸಿ ಸಂಸ್ಥೆಯ ಎಲ್ಲಾ ಕಾಲೇಜುಗಳಿಂದ ನಿಧಿ ಸಂಗ್ರಹಿಸಿದ ಮೊತ್ತಕ್ಕೆ ಸಂಸ್ಥೆಯು ಹಣ ಸೇರಿಸಿ, ದೊಡ್ಡ ಮೊತ್ತವನ್ನು ನಿಧಿಗೆ ಅರ್ಪಿಸುವ ಘನ ಉದ್ದೇಶ ಹೊಂದಿದೆ. ಹಾಗೂ ಪಟ್ಟಣದಲ್ಲಿ ನಿಧಿ ಸಂಗ್ರಹಿಸಲು ಸ್ವತ: ಶ್ರೀಗಳೇ ಸಂಚರಿಸಿ ಕೊನೆಗೆ ಸರ್ಕಾರಿ ಪದವಿ ಪೂರ್ವ ವಿದ್ಯಾಲಯದಲ್ಲಿ ಶಾಸಕರು, ಅಧಿಕಾರಿಗಳು, ಗಣ್ಯರು, ಹಾಗೂ ಸಾರ್ವಜನಿಕರ ಸಮ್ಮುಖದಲ್ಲಿ ಹುಂಡಿಯಲ್ಲಿ ಸಂಗ್ರಹವಾದ ಹಣವನ್ನು ಬಹಿರಂಗವಾಗಿ ಎಣಿಕೆ ಮಾಡಿ ಅದಕ್ಕೆ ತಾವು ೨೫,೦೦೦=೦೦ ನೀಡಿ, ಇದರಜೊತೆಗೆ ಟಿ.ಎಂ.ಎ.ಈ. ಸಂಸ್ಥೆಯ ಎಸ್.ಸಿ.ಎಸ್. ಫಾರ್ಮಸಿ ಕಾಲೇಜಿನ ವಿದ್ಯಾರ್ಥಿಗಳು ೧೩,೧೫೫=೦೦ ನೀಡಿದರು.

ಈ ಎಲ್ಲಾ ಹಣವನ್ನು ಸಂಗ್ರಹಿಸಿ ಯೋದರಿಗೆ ಕಳುಹಿಸುವುದರ ಮೂಲಕ ತೆಗ್ಗಿನ ಮಠದ ಶ್ರೀಗಳು ತಮ್ಮಲ್ಲಿರುವ ಒಳ್ಳೆಯ ಗುಣ ತೋರಿಸಿ, ಸಮಾಜದಲ್ಲಿ ಕಷ್ಟ ಹಾಗೂ ತೊಂದರೆಯಲ್ಲಿರುವವರಿಗೆ ಆಶ್ರಯದಾತರಾಗಿದ್ದಾರೆ. ಇವುಗಳ ಜೊತೆಗೂಡಿ ಗೋಪುರಗಳನ್ನು ಕಟ್ಟಿಸುವ ಮುಖಾಂತರ ತಮ್ಮ ಧಾರ್ಮಿಕ ಪ್ರಭುತ್ವವನ್ನು ಮೆರೆದಿದ್ದಾರೆ. ಇವುಗಳಲ್ಲದೇ ತಮ್ಮ ಸಂಸ್ಥೆ ವತಿಯಿಂದ ನಡೆಸುತ್ತಿರುವ ವೃತ್ತಿಪರ ಕೋಸಗಳಲ್ಲಿ ಹಾಗೂ ಇತರ ಕೋರ್ಸ್‌ಗಳಲ್ಲಿ ಹೆಚ್ಚಿನ ಅಂಕ ಪಡೆದು ಸಂಸ್ಥೆಗೆ ಹೆಸರು ತಂದಿರುವ ವಿದ್ಯಾರ್ಥಿಗಳಿಗೆ ಪ್ರೋತ್ಸಾಹದಾಯಕ ಬಹುಮಾನಗಳನ್ನು ನೀಡುವ ಮೂಲಕ ಮುಂದಿನ ವಿದ್ಯಾರ್ಥಿಗಳು ತಮ್ಮ ಶೈಕ್ಷಣಿಕ ಜವಬ್ದಾರಿಯನ್ನು ಹೆಚ್ಚಿಸಿಕೊಳ್ಳಲು ಕಾರಣಕರ್ತರಾಗಿದ್ದಾರೆ. ಶಿವಾಚಾರ್ಯರು ಕೆಲವೊಮ್ಮೆ ಆಧ್ಯಾತ್ಮ ಶಿಕ್ಷಣ ಸಂಸ್ಥೆಗಳನ್ನು ಅಭಿವೃದ್ಧಿಪಡಿಸುವಲ್ಲಿ ಕಾರ್ಯನಿರತರಾಗದೇ ತಮಗೂ ತಮ್ಮ ಮಠಕ್ಕೂ ಸಂಸ್ಕೃತ ಮತ್ತು ಸಂಗೀತ ಕಲೆಗಳ ಬಗೆಗಿರುವ ಆಸಕ್ತಿಯಿಂದಾಗಿ ಹರಪನಹಳ್ಳಿ ಮತ್ತು ದೂಳೆಹೊಳೆಯಲ್ಲಿ ಸಂಸ್ಕೃತ, ಸಂಗೀತಶಾಲೆಗಳನ್ನು ತೆರೆಯುವುದರ ಮೂಲಕ ಹಾಗೂ ಹೂವಿನಹಡಗಲಿಯಲ್ಲಿರುವ ರಂಗಭಾರತಿ ಸಂಸ್ಥೆ ಹಾಗೂ ಕೊಟ್ಟೂರಿನ ಕಲಾಕೇಂದ್ರಕ್ಕೆ ಈಗಲೂ ಆಶ್ರಯದಾತರಾಗಿ ಆ ಸಂಸ್ಥೆಗಳು ನಡೆಯಲು ಕಾರಣೀಬೂತರಾಗಿದ್ದಾರೆ. ಅಷ್ಟೇ ಅಲ್ಲದೇ

ಹರಪನಹಳ್ಳಿಯಲ್ಲಿ ಅಂಗನವಾಡಿ ಕೇಂದ್ರ ತೆರೆದು ಮಹಿಳೆಯರಲ್ಲಿರುವ ಪ್ರತಿಭೆಯನ್ನು ಮಕ್ಕಳಿಗೆ ತಿಳಿಹೇಳಿ ಮಕ್ಕಳನ್ನು ಜ್ಞಾನವಂತರನ್ನಾಗಿಸಲು ಪ್ರಯತ್ನಿಸಿದ್ದಾರೆ. ಈ ಎಲ್ಲಾ ಸಂಸ್ಥೆಗಳು ನಡೆಯಲು ಶ್ರೀಗಳವರೇ ಕಾರಣೀಭೂತರಾಗಿ ಸಮಾಜ ಉದ್ಧಾರ ಮಾಡುವಲ್ಲಿ ಉದಾರಮನೋಭಾವ ಹೊಂದಿದ್ದಾರೆ.

ರಂಭಾಪುರಿ ಪೀಠದಲ್ಲಿ ಗುರುಕುಲ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರುವಲ್ಲಿ ಯತ್ನಿಸಿದ್ದಾರೆ. ಹೂವಿನಹಡಗಲಿ ತಾಲೂಕಿನ ಸೋಗಿ ಗ್ರಾಮದಲ್ಲಿ ಆಶ್ರಯ ಯೋಜನೆಅಡಿಯಲ್ಲಿ ಮನೆಗಳನ್ನು ವಿತರಿಸುವಲ್ಲಿ ತಮ್ಮ ಕೈಲಾದಷ್ಟು ಸಹಾಯ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದತ್ತಿ ನಿಧಿಯನ್ನು ಸ್ಥಾಪಿಸಿದ್ದಾರೆ.ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ತಮ್ಮ ಮನೆಗಳನ್ನು ಕಳೆದುಕೊಂಡ ಪತ್ರಿಕಾ ವರದಿಗಾರರಿಗೆ ಶ್ರೀಪಾಟೀಲ ಪುಟ್ಟಪ್ಪನವರ ಶಿಫಾರಸ್ಸಿನ ಮೇರೆಗೆ ಧನಸಹಾಯ ಮಾಡಿದ್ದಾರೆ. ಕೊಟ್ಟೂರಿನಲ್ಲಿ ಶ್ರೀ ಎಂ.ಎಂ.ಜೆ ಅವರ ಪುತ್ರ ಕಟ್ಟಿಸಿದ ಕಲಾಕೇಂದ್ರಕ್ಕೆ ದೇಣಿಗೆ ನೀಡಿದ್ದಾರೆ. ಹಾಗೂ ಹಲವಾರು ಸಮುದಾಯ ಸಂಘಟನೆಗಳಿಗೆ ಕಾಣಿಕೆಯನ್ನು ನೀಡಿದ್ದಾರೆ.

ಶ್ರೀಗಳು ತಮ್ಮ ಸ್ವಗ್ರಾಮವಾದ ನಾಗತಿಬಸಾಪುರ ಗ್ರಾಮದಲ್ಲಿ ಸನ್ಮಾನ್ಯ ಶ್ರೀ. ಎಂ.ಪಿ. ಪ್ರಕಾಶ್ ಅವರ ಪ್ರಯತ್ನದಿಂದಾಗಿ ಮಂಗಳೂರು ಕೆಮಿಕಲ್ಸ್ ಮತ್ತು ಫರ್ಟಿಲೈಸರ್ಸ್ ಸಂಸ್ಥೆಯವರು ನಿರ್ಮಿಸಿರುವ ಸಮುದಾಯ ಭವನಕ್ಕೆ ಆರ್ಥಿಕ ನೆರವು ನೀಡಿದ್ದಾರಲ್ಲದೇ ಈಶ್ವರದೇವಸ್ಥಾನ ಹಾಗೂ ತೆಗ್ಗಿನ ಮಠದ ಶಾಖಾಮಠ ನಿರ್ಮಾಣ ಮಾಡಿದ್ದಾರೆ. ನಾಗತಿ ಬಸಾಪುರದಲ್ಲಿ ಸರಕಾರಿ ಪ್ರೌಢಶಾಲೆಗೆ ನಾಲ್ಕು ಎಕರೇ ಜಮೀನನ್ನು ದೇಣಿಗೆಯಾಗಿ ನೀಡುವುದರ ಮೂಲಕ ಜನತಾ ಆರೋಗ್ಯವನ್ನು ಕಾಪಾಡಿಕೊಂಡು ಬರುತ್ತಿದ್ದಾರೆ.

ಶ್ರೀಗಳವರ ನಿಸರ್ಗಪ್ರೀತಿ ಅನನ್ಯವಾದದ್ದು, ಮಠದ ಜಮೀನುಗಳಲೆಲ್ಲಾ ಮರಗಿಡಗಳನ್ನು ಬೆಳೆಸುವಲ್ಲಿ ಯಶಸ್ವಿಯಾಗಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸಿ, ಸಂಸ್ಕೃತಿ ಸಾಮರಸ್ಯವನ್ನು ಸಾರುವಂಥಹ ಕಾರ್ಯಕ್ರಮಗಳನ್ನು ಸಂಘಟಿಸಿದ್ದಾರೆ. ಮಠದ ಆವರಣದಲ್ಲಿ ನಿತ್ಯವೂ ಧಾರ್ಮಿಕ ಸಭೆಗಳನ್ನು ನಡೆಸಿ ಬೇಸತ್ತ ಜನರನ್ನು ಉತ್ಸಾಹದಾಯಿಗಳನ್ನಾಗಿ ನಿತ್ಯವು ಮಾಡುತ್ತಿದ್ದಾರೆ. ಆಸಕ್ತಿಯುಳ್ಳ ಅನ್ಯಜಾತಿ ಮತ್ತು ಧರ್ಮದ ಸಮುದಾಯದವರಿಗೂ ಲಿಂಗ ಧೀಕ್ಷೆಯನ್ನು ನೀಡಿ ಗೌರವಿಸುತ್ತಿದ್ದಾರೆ. ಸನಾತನ ವೈದಿಕ ಆದರ್ಶಗಳನ್ನು ವ್ಯಕ್ತಿಯ ವ್ಯಕ್ತಿತ್ವದ ವಿಕಾಸಕ್ಕೆ ಬಳಸಿಕೊಳ್ಳಲು ಪ್ರೇರಣೆ ನೀಡುತ್ತಿದ್ದಾರೆ. ಜಾತ್ಯಾತೀತ ಆಧಾರದ ಮೇಲೆ ಶಿಕ್ಷಣವನ್ನು ಸಮುದಾಯಕ್ಕೆ ಒದಗಿಸುತ್ತಿದ್ದಾರೆ. ಭಾವಿ ಭಾರತಕ್ಕೆ ಉತ್ತಮ ನಾಗರಿಕರನ್ನು ಒದಗಿಸುವ ನಿಟ್ಟಿನಲ್ಲಿ ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳನ್ನು ಸಂಘಟಿಸುತ್ತಿದ್ದಾರೆ. ಧಾರ್ಮಿಕ ಕೇಂದ್ರಗಳು ಮಠಮಾನ್ಯಗಳು ಹಾಗೂ. ಪ್ರಾಚೀನ ಸ್ಮಾರಕಗಳನ್ನು ಅಭಿವೃದ್ಧಿಪಡಿಸಿ ಅವುಗಳ ಸಾಂಸ್ಕೃತಿಕ ಮಹತ್ವವನ್ನು ಕಾಪಾಡಲು ಕಟಿಬದ್ಧರಾಗಿ ನಿಂತಿದ್ದಾರೆ. ಮಧ್ಯಪಾನ ಮತ್ತು ಇತರ ಮಾದಕವಸ್ತುಗಳ ಚಟಗಳನ್ನು ಹೊದಿದವರಿಗಾಗಿ ನಿವೃತ್ತಿ ಶಿಬಿರಗಳನ್ನು ಆಯೋಜಿಸಿದ್ದಾರೆ. ಅಲ್ಲದೇ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವಲ್ಲಿ ಸಕ್ರೀಯ ಪಾತ್ರ ವಹಿಸಿದ್ದಾರೆ.

### ಸ್ವಾಮೀಜಿ ಕುರಿತ ಹಾಡುಗಳು(ಧರ್ಮಗೀತೆ) ರೇಣುಕಾಲಹರಿ

**"ಅ" ಭಾಗ**

೧. ಶ್ರೀ ರೇಣುಕಾಚಾರ್ಯ ಸುಪ್ರಭಾತ  ಡಾ. ಪಿ.ಬಿ.ಶ್ರೀನಿವಾಸ್ ಮತ್ತು ಲತಾ ಬೆಂಗಳೂರು

೨. ಶ್ರೀ ವೀರಭದ್ರೇಶ್ವರ ಸುಪ್ರಬಾತ ಡಾ. ಪಿ.ಬಿ.ಶ್ರೀನಿವಾಸ್ ಮತ್ತು ಲತಾ ಬೆಂಗಳೂರು

೩. ಓಂ ವೀರಶೈವ – ಡಾ. ಪಿ.ಬಿ.ಶ್ರೀನಿವಾಸ್ ಮತ್ತು ಲತಾ ಬೆಂಗಳೂರು

೪. ಶ್ರೀ ಚಂದ್ರಶೇಖರನೇ – ಶ್ರೀಮತಿ ಲತಾ ಬೆಂಗಳೂರು

೫. ಕೋಟಿಗೊಬ್ಬಶರಣ – ಶ್ರೀದುರ್ಗೇಶ ಗವಾಯಿ ದಾವಣಗೆರೆ

೬. ಧರ್ಮಕ್ಕೆ ಶರಣೆಂದು – ಶ್ರೀ ದುರ್ಗೇಶ ಗವಾಯಿ ದಾವಣಗೆರೆ

**"ಬ" ಭಾಗ**

೭. ಗುರುಹಿರಿಯರನೆಂದಿಗೂ – ಶ್ರೀ ದುರ್ಗೇಶ ಗವಾಯಿ ಮತ್ತು ಸಂಗೀತ ದಾವಣಗೆರೆ

೮. ಬೀಗತಿ ಬಂದಾಳ – ಶ್ರೀಮತಿ ನಿರ್ಮಲಾ ಚನ್ನಗಿರಿಮತ್ತು ಶ್ರೀಮತಿ ಸಂಗೀತ ದಾವಣಗೆರೆ

೯. ಮಾಂಗಲ್ಯಮಂದಿರವು–ಶ್ರೀಮತಿನಿರ್ಮಲಾ ಚನ್ನಗಿರಿಮತ್ತು ಶ್ರೀಮತಿ ಸಂಗೀತ ದಾವಣಗೆರೆ

೧೦ ಗುರುವು ಬಂದಾನ– ಶ್ರೀಮತಿ ನಿರ್ಮಲಾ ಚನ್ನಗಿರಿಮತ್ತು ಶ್ರೀ ಬಸವರಾಜ ಮದಬಾವಿ

೧೧. ಪರಶಿವನ ಒಡೆಯ; ಶ್ರೀಮತಿ ನಿರ್ಮಲಾ ಮತ್ತು ಬಸವರಾಜ್

೧೨. ಶ್ರೀಶವಾಚಾರ್ಯರಿಗೆ ವಂದನೆ: ಶ್ರೀ ಗುರುಸ್ವಾಮಿ ಕಲಕೇರಿ

### ಶ್ರೀಗಳವರ ಜೀವನ ದರ್ಶನ ಮತ್ತು ವಿದ್ಯಾಸಂಸ್ಥೆಗಳನ್ನು ಕುರಿತ ಭಕ್ತಿಗೀತೆಗಳು

೧. ಅಭಿನಂದನಾ ಪೂಜಾ ಮಾಲೆ:ಶ್ರೀ ವೇ ಮೂ. ಪತ್ರಯ್ಯಶಾಸ್ತ್ರಿಗಳು ಹಿರೇಮಠ ಮರೋಳ್

೨. ರಜತಮಹೋತ್ಸವ : ಶ್ರೀ ವೇ ಮೂ.ಬಾಲಚಂದ್ರಶಾಸ್ತ್ರಿ ಹಿರೇಮಠ, (ರಾಗ – ದಾನಿ) (ಲಾಳ – ದಾದರಾ)

೩. ಜಾಗುಟನಾದ ; ಶ್ರೀ ವೇ. ಮೂ. ಕೆ.ಎಂ.ಜ್ಞಾನಯೋಗೀಶ್ವರ ಶಾಸ್ತ್ರೀಜಿ

೪. ಭಕ್ತಿ ಗೀತೆ : ಡಾ. ವೀರಭದ್ರಯ್ಯಶಾಸ್ತ್ರಿ ಗಳು (ರಾಗ – ಬಿಲಾವಲ್) (ತಾಳ – ದಾದರ)

೫. ಚಂದದಿ ಬೆಳಗಿದ ದೀಪ : ಹಾ.ಕೆ.ಜಾತಪ್ಪ

### ತ್ರಿಪದಿ ಮತ್ತು ಕಂದದಲ್ಲಿರುವ ಹಾಡುಗಳು

೧. ಅಗ್ರಗಣ್ಯ : (ಕಂದ) ರಚಿಸಿ ಹಾಡಿದವರು : ಗುರುಕವಿ ಗಂಗಾಧರ

೨. ಸುವಿಚಾರಿ ಕಂಡಂತೆ ಶ್ರೀಗಳು : ರಚಿಸಿ ಹಾಡಿದವರು ಸುವಿಚಾರಿ

೩. ಅಪ್ರತಿಮ ಚೈತನ್ಯಮೂರ್ತಿ : ಶ್ರೀ ಎನ್.ಎಂ. ಕೆ ಸೋಗಿ

೪. ಬೆಳಕು ಚೆಲ್ಲೈತೆ : ರಚಿಸಿ ಹಾಡಿದವರು ಬಾಲಚಂದ್ರಶಾಸ್ತ್ರಿ
(ರಾಗಪ್ರತಾಪವಳಿ) (ತಾಳ ಕೇರವಾ)

೫. ಸಾರ್ಥಕ ಜನ್ಮ : ಹಾಡಿದವರು ಪಿ.ಬಿ. ಶ್ರೀನಿವಾಸ
(ತ್ರಿಶ್ರ – ತಾಳ) (ಭಕ್ತಿ – ರಾಗ)

೬. ವಿದ್ಯಾವಿಧಾತ : ತೇಜಂಕ್ಯ

೭. ಸ್ತೋತ್ರ : ಸಿ.ಎಂ. ಚನ್ನಬಸಯ್ಯ

೮. ಶ್ರೀ ಚಂದ್ರಮೌಳೇಶ್ವರ ರಾಷ್ಟ್ರಕಂಡಂತೆ – ಡಾ ಮಲ್ಲಿಕಾರ್ಜುನ ಪರಡ್ಡಿ

೯. ಹರಪುರದ ಸಿರಿ

## ಟಿಪ್ಪಣಿಗಳು

೧. ಕರ್ತರನ ಕ್ರಾಂತ ದೃಷ್ಠಿ : ಪುಟ – ೨೮

೨. ಕ್ರಿಯಾಶೀಲ: ಪುಟ – ೮೧

೩. ಕ್ರಿಯಾಶೀಲ : ಪುಟ – ೮೦

೪. ಹರಪನಹಳ್ಳಿ ತಾಲೂಕ ಸ್ವಾತಂತ್ರ್ಯ ಹೋರಾಟಗಾರರು: ಪುಟ – ೧೧
ದಿನಾಂಕ: ೧೫.೮.೨೦೦೫. ದಿನಪತ್ರಿಕೆಗಳ ಉಪಯೋಗ

೫. ತೆಗ್ಗಿನಮಠದ ಶ್ರೀ ಚಂದ್ರಶೇಖರ ಶಿವಾಚಾರ್ಯರು : ಪುಟ – ೧೭

೬ ಶಿವಾಚಾರ್ಯ ರತ್ನದೀಪ್ತಿ : ಪುಟ – ೨

೭ ಕರ್ತಾರನ ಕ್ರಾಂತ ದೃಷ್ಠಿ : ಪುಟ – ೭೫

## ಅಧ್ಯಾಯ: ಆರು

# ಜನಪರ ಕಲ್ಯಾಣ ಕಾರ್ಯಕ್ರಮಗಳು

### ೬.೧ ಉಚಿತ ಸಾಮೂಹಿಕ ವಿವಾಹ

ಸ್ಪರ್ಧಾತ್ಮಕ ಯುಗದಲ್ಲಿ ಆಹಾರಧಾನ್ಯಗಳ ಬೆಲೆಗಳೆಲ್ಲ ಗಗನಕುಸುಮವಾಗಿವೆ. ಊಟಕ್ಕೆ ಅನ್ನವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಜನರು ಕಂಗಾಲಾಗಿದ್ದಾರೆ. ಒಂದು ವರ್ಷಅತೀವ ವೃಷ್ಠಿಯಾದರೆ, ಇನ್ನೊಂದು ವರ್ಷ ಅನಾವೃಷ್ಠಿ. ಬೇರೆ ರಾಜ್ಯದಲ್ಲಿ ಹೆಚ್ಚಿನ ಮಳೆಯಾದರೆ ಆ ನೀರನ್ನು ನಮ್ಮ ರಾಜ್ಯದಲ್ಲಿ ಹರಿಯಬಿಟ್ಟು ರೈತರನ್ನು ಕಂಗಾಲು ಮಾಡುವುದು, ಇಂತಹ ಹಲವಾರು ಸಂಕಷ್ಟಗಳನ್ನು ಸಹಿಸಲಾಗದೆ ಜನರು ಮಹಾನಗರಗಳಿಗೆ ವಲಸೆ ಹೋಗುತ್ತಿರುವುದನ್ನು ಕಾಣುತ್ತೇವೆ. ಅಂತಹ ನಿಸರ್ಗದ ಕೋಪಕ್ಕೆ ಒಳಗಾದಂತಹ ಜನರ ಬದುಕು ದುರ್ಬಲವಾದಾಗ ಇನ್ನೂ ಮದುವೆ, ಮುಂಜಿಯಂತಹ ಕಾರ್ಯಕ್ರಮಗಳನ್ನು ನಿಭಾಯಿಸುವುದು ಹೇಗೆ ? ಹಾಗಾಗಿ ಸಮಾಜಿಕ ಹಿತದೃಷ್ಠಿಯಿಂದ ಸಂತರು, ಶರಣರು, ಮಠಾದೀಶರರು, ರಾಜಕಾರಣಿಗಳು ಇಂತಹ ಜನಪರ ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಅಂತವರಲ್ಲಿ ತೆಗ್ಗಿನಮಠವು ಒಂದು.

ತೆಗ್ಗಿನ ಮಠದ ಶ್ರೀಗಳವರ ಉದ್ದೇಶವೇ ಸಮಾಜದ ಉದ್ದಾರ "ಕೆರೆಯ ನೀರು ಕೆರೆಗೆ ಚೆಲ್ಲಿ" ಎನ್ನುವ ಹಾಗೆ ಒಂದು ಹೊತ್ತಿನ ಊಟಕ್ಕೂ ಇಲ್ಲದ ಬಡ ಜನರು ಜೀವಿಸುವುದೇ ಕಷ್ಟವಾಗಿರುವಾಗ ವಿವಾಹ ಎಂದರೆ ಹೆಚ್ಚು ಹಣ ಬೇಕಾಗುತ್ತದೆ. ಕೊನೆಗೆ ಸರಳವಾಗಿ ವಿವಾಹ ಮಾಡಬೇಕೆಂದರೂ ಕನಿಷ್ಠ ರೂ ೧೦,೦೦೦=೦೦ ಗಳನ್ನಾದರೂ ವೆಚ್ಚ ಮಾಡಬೇಕಾಗುತ್ತದೆ. ಇಂಥಹ ಸಂದರ್ಭದಲ್ಲಿ ಸಾಲ ಮಾಡಿ ಮದುವೆ ಮಾಡಿದರೆ ಮುಂದೆ ಮಳೆ ಚನ್ನಾಗಿ ಬಂದರೆ ಬೆಳೆಗಳುಚೆನ್ನಾಗಿ ಬರುತ್ತವೆ. ಮಳೆ ಬಾರದೇ ಇದ್ದರೇ ಬರಗಾಲ ಉಂಟಾಗಿ ಇದ್ದ ಹೊಲ,ಮನೆಗಳನ್ನು ಮಾರಿ ನಿರ್ಗತಿಕರಾಗಬೇಕಾಗುತ್ತದೆ.ಆದಕಾರಣ ಪೂಜ್ಯರು ತಮ್ಮ ಮಠಗಳಲ್ಲಿ ಮಾತ್ರವೆ ಅಲ್ಲದೇ ಹತ್ತಾರು ವರ್ಷಗಳಿಂದ ಹರಿಹರ ಹರಪನಹಳ್ಳಿ ಉಣಕಲ್ಲು ನಾಗತಿಬಸಾಪುರ ಮುಂತಾದ ಕಡೆಗಳಲ್ಲಿ ವರ್ಷಕ್ಕೆ ಒಂದು ಅಥವಾ ಎರಡು ಬಾರಿ ಸಮಯಾನುಸಾರ ಸಾಮೂಹಿಕ ಧರ್ಮಾರ್ಥ ಮಹಾಮಂಗಲ ಕಾರ್ಯಗಳಲ್ಲಿ ಉಚಿತವಾಗಿ ಬಟ್ಟೆ, ತಾಳಿ, ಹಾಗೂ ಫಲ ತಾಂಬೂಲಗಳನ್ನು ಕೊಟ್ಟು ಪೂಜ್ಯರು ಆ ನವವಿವಾಹಿತರಿಗೆ ಆಶೀರ್ವದಿಸುತ್ತಾರೆ.

ಜಾತಿ ವಿನಾಶದ ಪ್ರಯತ್ನದಲ್ಲಿ ಅಂತರ್‌ಜಾತಿ ವಿವಾಹವನ್ನು ಪ್ರೋತ್ಸಾಹಿಸಿದ್ದಾರೆ. ಸಾಮೂಹಿಕ ವಿವಾಹಗಳನ್ನು ಸಂಘಟಿಸಿದ್ದಾರೆ. ಮಠವೆಂದರೆ ಸನಾತನವು ಹೌದು, ಪ್ರಗತಿಪರ ವೇದಿಕೆಯು ಹೌದು ಎನ್ನುವ ತಿಳುವಳಿಕೆ ಅವರದು, ಹಾಗಾಗಿ ಇವೆರಡನ್ನೂ ಸಮನ್ವಯಗೊಳಿಸುವಂತಹ ಚಟುವಟಿಕೆಗಳಲ್ಲಿ ಶ್ರೀಗಳು ನಿರತರಾಗಿದ್ದಾರೆ. ಹರಪನಹಳ್ಳಿ ತುಂಬಾ ಹಿಂದುಳಿದ ಪ್ರದೇಶವಾಗಿದೆ ಅಲ್ಲೊಂದು ರೇಣುಕಾಚಾರ್ಯರ ಕಲ್ಯಾಣ ಮಂಟಪವನ್ನು ನಿರ್ಮಾಣ ಮಾಡುವುದರ ಮೂಲಕ ಸಾಮಾಜಿಕ ಕಲ್ಯಾಣ ಕಾರ್ಯಕ್ರಮಗಳನ್ನು ಆರಂಭಿಸಿದ್ದಾರೆ. ರೇಣುಕಾಚಾರ್ಯ ಸಮುದಾಯ ಭವನ, ಕಲ್ಯಾಣ ಮಂಟಪಗಳು ಶ್ರೀಗಳವರ ಸಾಮಾಜಿಕ ಕಳಕಳಿಯ ಮೊದಲ ವಾಸ್ತುರೂಪ, ಹೂವಿನಹಡಗಲಿ ತಾಲೂಕಿನ ಬೆಟ್ಟದ ಮಲ್ಲಯ್ಯನ ಪರ್ವತದಲ್ಲಿ ಶ್ರೀ ಚಂದ್ರಮೌಳೇಶ್ವರ ಕಲ್ಯಾಣ ಮಂಟಪವನ್ನು ನಿರ್ಮಿಸಿ ಸಮಾಜಕ್ಕೆ ಅರ್ಪಿಸಿದ್ದಾರೆ. ದಾವಣಗೆರೆ ಜಿಲ್ಲೆಯ ಅವರಗೊಳದಲ್ಲಿ ಮಂಗಳ ಭವನವನ್ನು ನಿರ್ಮಿಸಿದ್ದಾರೆ.

ಕೇದಾರ ಪೀಠದ ಕಟ್ಟಡಗಳ ಪುನರುಜ್ಜೀವನವನ್ನು ಮಾಡಲು ಪ್ರಯತ್ನಪಟ್ಟಿದ್ದಾರೆ. ಗಂಗಾವತಿಯಲ್ಲಿ ಶ್ರೀಚನ್ನಬಸವ ಶಿವಯೋಗಿಗಳ ಕಲ್ಯಾಣಮಂಟಪ ಮೂರ್ತಗೊಳ್ಳಲು ರೂವಾರಿಯಾಗಿ ನಿಂತಿದ್ದಾರೆ. ವಾರಣಾಸಿಯ ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನಕ್ಕೆ ತಮ್ಮ ಕೈಲಾದಸಹಾಯ ಹಸ್ತವನ್ನು ನೀಡಿದ್ದಾರೆ. ಗಡಾದಲ್ಲಿ ಪಾಠಶಾಲೆಯನ್ನು ನಿರ್ಮಿಸಿದ್ದಾರೆ.

ಸ್ವಾತಂತ್ರ್ಯ ನಂತರದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬುದ್ಧಿ ಜೀವಿಗಳಿಗೆ ಒಂದು ಸವಾಲೇ ಸರಿ? ಈ ನಿಟ್ಟಿನಲ್ಲಿ ಶ್ರೀಗಳವರು ಕೈ ಕಟ್ಟಿ ಕುಳಿತಿಲ್ಲ. ಸಾಮಾಜೋಧಾರ್ಮಿಕ ಸುಧಾರಣೆಗಳನ್ನು ಗ್ರಾಮೀಣ ಹಂತದಲ್ಲಿ ಅನುಷ್ಠಾನಗೊಳಿಸಿ ಆ ಪ್ರದೇಶವನ್ನು ಮೇಲೆತ್ತುವ ಹರಸಾಹಸಕ್ಕೆ ಕೈಹಾಕಿದ್ದಾರೆ. ಸಮಾಜದಲ್ಲಿ ದ್ವೇಷಾಸೂಯೆಗಳು ಸ್ವಾರ್ಥಪರ ಆಲೋಚನೆಗಳು ಮೂಡದಂತೆ ಗ್ರಾಮೀಣ ಜನತೆಯ ಅಂತರಂಗದ ಪರಿವರ್ತನೆಯ ಕೆಲಸವನ್ನು ಮಾಡುತ್ತಿದ್ದಾರೆ. ಯುವ ಪೀಳಿಗೆಯನ್ನು ಸ್ವಯಂ ಉದ್ಯೋಗ ಪರಿಕಲ್ಪನೆಯ ಮೂಲಕ ಸ್ವಾವಲಂಭಿಗಳನ್ನಾಗಿಸುತ್ತಿದ್ದಾರೆ. ಸರ್ಕಾರದ ಆಶ್ರಯ ಯೋಜನೆಗಳ ಜೊತೆ ಜೊತೆಗೆ ಜೋಡೆತ್ತಾಗಿ ದುಡಿದು ಭೂಮಿಯನ್ನು ದಾನ ಮಾಡಿದ್ದಾರೆ ಗ್ರಾಮೀಣ ಪ್ರದೇಶದಲ್ಲಿ ರುದ್ರಭೂಮಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ.ಪರಿಸರ ಸಂರಕ್ಷಣೆಯ ಉದ್ದೇಶದಿಂದ ವನಮಹೋತ್ಸವದಂತಹ ಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಹೀಗೆ ದಾಸೋಹದ ಜೊತೆಗೆ ಶಿಕ್ಷಣ ದಾಸೋಹ ಸಂಸ್ಥೆಗಳನ್ನು ತೆರೆಯುವುದರ ಜೊತೆಗೆ ಕಲ್ಯಾಣಕಾರ್ಯಕ್ರಮಗಳನ್ನು ನಡೆಸುತ್ತಾರೆ.

### ೬.೨ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಹೆಸರಿನಲ್ಲಿ ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ

ಒಂದು ಮಠವೆಂದರೆ ಅದು ಸ್ವತಂತ್ರವಲ್ಲ. ಅದು ಆ ಊರಿನ ಜನರ ಸ್ವತ್ತುಆಗಿರುತ್ತದೆ. ಅದಕ್ಕೆ ಒಬ್ಬ ರೂವಾರಿ ಅವನಿಂದಲೆ ಎಲ್ಲಾ ಕಾರ್ಯಗಳು ಜರುಗಬೇಕು. ಅವನಿಗೆ ಎಲ್ಲರು ಧನ್ಯರು ಎಂಬ ಭಾವನೆ ಊರ ಜನರಲ್ಲಿರುತ್ತದೆ. ಹಾಗೆಯೆ ಆ ಮಠದ ಪೀಠ ಅಲಂಕರಿಸಿದವನಿಗೂ ಲೋಕೋಪಕಾರದಂತಹ ಕಾಳಜಿಗಳು ಬೇಕಾಗುತ್ತದೆ.ಜನರು ತ್ಯಾಗ ಮತ್ತು ನಿಸ್ವಾರ್ಥ ಸೇವೆಯನ್ನು

ಅಪೇಕ್ಷಿಸುತ್ತಾರೆ. ಆ ನಿಟ್ಟಿನಲ್ಲಿ ತೆಗ್ಗಿನಮಠವು ಒಂದು. ಶೈಕ್ಷಣಿಕ ಸಂಸ್ಥೆಯಾಗಿ ಬೆಳೆಸಿದ ಕೀರ್ತಿ ಶ್ರೀ ಚಂದ್ರಮೌಳೇಶ್ವರರಿಗೆ ಸಲ್ಲುತ್ತದೆ.

ತೆಗ್ಗಿನಮಠದ ಶೈಕ್ಷಣಿಕ ಕೊಡುಗೆ ಸಮಾಜಕ್ಕೆ ಅಪಾರವಾದದ್ದು ಬೇರೆ ಮಠಗಳ ಶೈಕ್ಷಣಿಕ ಸಂಸ್ಥೆಗಳನ್ನು ಗಮನಿಸಿದಾಗ ಅವುಗಳಲ್ಲಿ ಎಲ್ಲೋ ಒಂದು ರೀತಿಯಲ್ಲಿ ನಿರ್ದಿಷ್ಟವಾದ ಸಮುದಯಕ್ಕೆ ಅಂದರೆ ತಮ್ಮ ಸಮುದಾಯದವರಿಗೆ ಹೆಚ್ಚಿನ ಒತ್ತು ಕೊಡುವುದನ್ನು ಕಾಣುತ್ತೇವೆ. ಆದರೆ ಹರಪನಹಳ್ಳಿ ತೆಗ್ಗಿನಮಠದ ಸ್ವಾಮಿಗಳವರು ಕೇವಲ ತಮ್ಮ ಸಮುದಾಯದವರಿಗೆ ಶೈಕ್ಷಣಿಕ ಸಂಸ್ಥೆಗಳನ್ನು ತರೆಯದೆ ಸಮಾಜದ ಶೋಷಣೆಗೆ ಒಳಗಾಗಿರುವ ಸಮುದಾಯಗಳಿಗೂ ಶಿಕ್ಷಣವನ್ನು ತಲುಪಿಸಬೇಕೆನ್ನುವ ಉದ್ದೇಶದಿಂದ ಶಿಕ್ಷಣ ಸಂಸ್ಥೆಗಳನ್ನು ತೆರೆದಿರುವುದನ್ನು ಕಾಣುತ್ತೇವೆ. ಜೊತೆಗೆ ಹಿಂದುಳಿದ ಪ್ರದೇಶಗಳಾದ ತಾಂಡ ಕನಿಷ್ಠ ಸೌಲಭ್ಯಗಳಿಲ್ಲದ ಹಳ್ಳಿಗಳಲ್ಲಿಯೂ ಸಹ ವಿದ್ಯಾಸಂಸ್ಥೆಗಳನ್ನು ತೆರೆಯುವ ಮೂಲಕ ತಾವೂ ತಮ್ಮ ಮನಸ್ಸಿನಲ್ಲಿ ಅಂದುಕೊಂಡಿರುವ ಸಮಾನತಾ ಸಮಾಜವನ್ನು ನಿರ್ಮಿಸಲು ಹರಿಕಾರರಾಗಿ ಶ್ರಮಿಸುತ್ತಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಬಳ್ಳಾರಿ ಜಿಲ್ಲೆಯಲ್ಲಿರುವ ಹೂವಿನಹಡಗಲಿ ತಾಲೂಕಿನ ಕುಮಾರನಹಳ್ಳಿ ತಾಂಡದಲ್ಲಿ "ಹರಿಶ್ಚಂದ್ರನಾಯಕ್" ಗೋಗಲಿಬಾಯಿಯವರ ಹೆಸರಿನಲ್ಲಿರುವ ವಸತಿಯುತ ಪ್ರೌಢಶಾಲೆ ಹಾಗೂ ಹಂಪಾಪಟ್ಟಣದಲ್ಲಿರುವ ವಸತಿ ಪ್ರೌಢಶಾಲೆ, ಮತ್ತು ೧೯೯೯ರಲ್ಲಿ ಕೆಲವು ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರ ಹೆಸರಿನಲ್ಲಿರುವ ಸಂಸ್ಥೆಯ ಶಾಲೆಗಳನ್ನು ಶ್ರೀಗಳು ದತ್ತುವಾಗಿ ಪಡೆದುಕೊಂಡರು. ಅವುಗಳು ಹೀಗಿವೆ.

೧.ಕೆಂಚಪ್ಪ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆ ಬಳ್ಳಾರಿ

೨.ಶ್ರೀಮತಿ ಬಸಮ್ಮ ಹಿರಿಯ ಪ್ರಾಥಮಿಕ ಪ್ರೌಢಶಾಲೆ ಕೌಲ್‌ಬಜಾರ್ ಬಳ್ಳಾರಿ

೩.ನಾಗಯ್ಯ ಚೌದರಿ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆ

೪.ಶ್ರೀ ಮಲ್ಲೇಶ್ವರ ಹಿರಿಯ ಪ್ರಾಥಮಿಕ ಶಾಲೆ ಬಳ್ಳಾರಿ

೫.ಪಾಂಡುರಂಗ ಹಿರಿಯ ಪ್ರಾಥಮಿಕ ಶಾಲೆ ಅನಂತಶಯನ ಗುಡಿ. ಹೊಸಪೇಟೆ ತಾ.

೬.ಡಾ. ಅಂಬೇಡ್ಕರ್ ಹಿರಿಯ ಪ್ರಾಥಮಿಕ ಶಾಲೆ ಮಲಪನಗುಡಿ

೭.ಡಾ. ಅಂಬೇಡ್ಕರ್ ಹಿರಿಯ ಪ್ರಾರ್ಥಮಿಕ ಶಾಲೆ ದೇವಸಮುದ್ರ

೮.ಡಾ. ಅಂಬೇಡ್ಕರ್ ಹಿರಿಯ ಪ್ರಥಮಿಕ ಶಾಲೆ ಮತ್ತಿಹಳ್ಳಿ, ಹರಪನಹಳ್ಳಿ ತಾ.

೯.ಡಾ. ಅಂಬೇಡ್ಕರ್ ಹಿರಿಯ ಪ್ರಾಥಮಿಕ ಶಾಲೆ ಸಾಸ್ವಿಹಳ್ಳಿ .

೧೦. ಶ್ರೀರೇಣುಕ ಹಿರಿಯ ಪ್ರಾಥಮಿಕ ಶಾಲೆ ಕಂಬತ್ತಹಳ್ಳಿ.

೧೧. ಡಾ. ಅಂಬೇಡ್ಕರ್ ಹಿರಿಯ ಪ್ರಾಥಮಿಕಶಾಲೆ ಬಾಗಳಿ. ಹರಪನಹಳ್ಳಿ ತಾ.

ಇನ್ನೂ ಮುಂತಾದ ಶಾಲೆಗಳು ಉದಾಹರಣೆಗಳಾಗಿವೆ. ಇವುಗಳನ್ನು ದತ್ತು ತೆಗೆದುಕೊಂಡು ಸುತ್ತಮುತ್ತಲಿನ ಪರಿಸರದಲ್ಲಿ ಬದುಕುವ ಜನರಿಗೆ ಸಾರ್ವತ್ರಿಕ ಶಿಕ್ಷಣ ಒದಗಿಸಬೇಕೆಂಬ ಮಹಾದಾಸೆ ಸ್ವಾಮೀಜಿಯವರದು.

## ೬.೩ ದಾಸೋಹ

ದಾಸೋಹವೆಂದರೆ ಹಲವಾರುರೀತಿಯ ದಾಸೋಹಗಳಿವೆ. ಅವುಗಳಲ್ಲಿ ಮುಖ್ಯವಾಗಿರುವುದು ಜ್ಞಾನದಾಸೋಹ, ಮತ್ತು ಅನ್ನದಾಸೋಹ ಇವೆರಡು ಪ್ರಕಾರದ ದಾಸೋಹವನ್ನು ಶ್ರೀಗಳು ನಡೆಸಿದ ಕೀರ್ತಿಯಿದೆ.

ದಾಸೋಹವೆಂದರೆ ಇದ್ದವರಿಂದ ಧವಸ ಧಾನ್ಯಗಳನ್ನು (ಹಣ) ತೆಗೆದುಕೊಂಡು ಒಂದೊಪ್ಪತ್ತಿಗೂ ಊಟವಿಲ್ಲದೇ ನರಳುತ್ತಿರುವ ಜನಸಾಮಾನ್ಯರಿಗೆ ಊಟದ ವ್ಯವಸ್ಥೆಯನ್ನು ಕಲ್ಪಿಸಿಕೊಡುವುದಕ್ಕೆ ದಾಸೋಹ ಎನ್ನಬಹುದಾಗಿದೆ.

"ವೀರಶೈವ ಧರ್ಮದ ಕೊಡುಗೆಗಳಲ್ಲಿ "ದಾಸೋಹವು" ಒಂದು ಧರ್ಮ ಗುರುಗಳು ಇದಕ್ಕೆ ವಿಶೇಷ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಅಂತೆಯೇ ಶ್ರೀಚಂದ್ರಶೇಖರ ಶಿವಾಚಾರ್ಯರುಸ್ವಾಮಿಗಳು ಜ್ಞಾನದಸೋಹ ಜೊತೆಗೆ ಅನ್ನ ದಾಸೋಹಕ್ಕೆ ಮಹತ್ವ ಕೊಟ್ಟಿದ್ದಾರೆ ಮಠಕ್ಕೆ ಬಂದ ಭಕ್ತರಿಗೆ ಪ್ರಸಾದದ ವ್ಯವಸ್ಥೆ ಇರುವಂತೆ ಮಾಡಿದ್ದರು. ಧರ್ಮಕ್ಕೆ ಅವರು ಒತ್ತು ಕೊಟ್ಟು ಅರ್ಥ ಬಹು ಸೂಕ್ಷ್ಮ ಹಾಗೂ ಗಂಭೀರ ಮಾತು ವಿಶಾಲಕಾಯಕದಲ್ಲಿ ಶಿವನನ್ನು ಕಾಣುವ ಜಾಣ್ಮೆ, ಹಸಿದವರಲ್ಲಿ ಹರನನ್ನು ತೃಪ್ತಿಗೊಳಿಸುವ ಸೂಕ್ಷ್ಮತೆ, ಆವೇಶಕ್ಕೆ ಒಳಗಾಗದ ಭಾವ, ಇವುಗಳಿಂದ ನಾಡನ್ನು ಆಕರ್ಷಿಸಿ ನಾಡ ಜನತೆಯನ್ನು ಆಚಾರ ಸಂಪನ್ನರಾಗಿ ಮಾಡಿ ಬಿಸಿಲು, ಮಳೆ ಎನ್ನದೇ ಸಾಗುತ್ತಿದ್ದ ಅವರ ಪ್ರಯಾಣದ ಚಕ್ಕಡಿ ಕೋಳಿ ಕೂಗಿದ ನಾಲ್ಕು ಗುಡಿಸಲುಗಳುಳ್ಳದೊಂದು ಹಳ್ಳಿಯನ್ನು ಬಿಡಲಿಲ್ಲ.

ಹವಳದ ಕಾಂತಿಯ ಹರೆಯದ ಚಲುವಿನ ಶರೀರ ಸವೆದಿದ್ದು ಭೋಗಕ್ಕಲ್ಲ. ತ್ಯಾಗಕ್ಕೆ ಶಿವಯೋಗಿಯ ಶರೀರ ವೃಥಾ ಕಳೆಯಲಾಗದೆಂದು ಹಳ್ಳಿ ಹಳ್ಳಿಯನ್ನು ತಿರುಗಿ ಧರ್ಮದ ಉಪದೇಶವನ್ನು ಮಾಡಿ, ಭಕ್ತರ ಭಿನ್ನಹವನ್ನು ಅವಧರಿಸಿ ಲಿಂಗಪೂಜಾನುಷ್ಠಾನಗಳನ್ನು ಗೈದು, ಭವತಾಪವನ್ನು ಹೀರಿ ಶಿವಕಳೆಯನ್ನು ಬೀರಿ ಸತ್ಯಕ್ಕೆ ಸಾಕ್ಷಿಯಾಗಿ ಮೆರೆದ ಪೂಜ್ಯರನ್ನು ಎಷ್ಟು ವರ್ಣಿಸಿದರೂ ಸಾಲದು ಎಲ್ಲರ ಪ್ರೇಮಕ್ಕೆ ಪಾತ್ರರಾಗಿ ತನುವಿನ ಸೇವೆ ಸಮಾಜಕ್ಕ ಸಾರೋದ್ಧಾರವಾಗಿ ಮಾಡಿದ ಈ ಶಿವಯೋಗಿಯ ಯಾತ್ರೆಗೆ ವಿಶ್ರಾಂತಿಯೇ ಇಲ್ಲ ದಾಸೋಹಕ್ಕಾಗಿ ಭಕ್ತರಿಂದ ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು ಶ್ರೀಗಳವರ ಕಾಯಕದಲ್ಲಿ ತ್ಯಾಗ ಇದೆ. ಸದ್ವಿನಿಯೋಗ ಇದೆ. ಸ್ವಾರ್ಥಕ್ಕಾಗಿ ಸಂಗ್ರಹ ಅಲ್ಲ. ಧರ್ಮ ಪ್ರಚಾರಕ್ಕೆ ಸಮಾಜ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರು ಪೂಜ್ಯರು ಕೈಕೊಂಡ ಕಾಯಕ ಅದು ಶಿವನಾಗಿ, ಕೊಡುವವ ಅವ, ಕೊಂಬುವವ ಅವನೇ ಎಂಬ ಭಾವನೆ ದಾಸೋಹ ಕಾರ್ಯಕ್ಕೆ ಶಿಷ್ಯರು ಕಾಣಿಕೆಯನ್ನು ಎಷ್ಟೇ ಕೊಟ್ಟರೂ ಸ್ವೀಕರಿಸುತ್ತಿದ್ದರು. ಧರ್ಮದ ಕಾರ್ಯಕ್ಕೆ

ನಾನೊಬ್ಬ ಪ್ರೇರಕ ಶಿವ ನಡೆಸಿದಂತೆ ನಡೆಯುತ್ತದೆ. ಎನ್ನುತ್ತಿದ್ದರು. ಕಾರೆಯ ಕಾಯಿ ಕಾಡು ಸೊಪ್ಪಾದರು ಕಾಯಕದಿಂದ ಬಂದುದು ಲಿಂಗಕ್ಕೆ ಅರ್ಪಿತ ದುರಾಸೆಯಿಂದ ಬಂದುದು ಅನರ್ಪಿತ ಎಂದು ಭಾವಿಸಿದ್ದರು. ಭಕ್ತರು ಕಾಣಿಕೆ ರೂಪದಲ್ಲಿ ಕೊಟ್ಟ ಧಾನ್ಯವನ್ನು ವರ್ಷದವರೆಗೂ ಸಂಗ್ರಹಿಸಿ ಅದನ್ನು ದಾಸೋಹಕ್ಕೆ ಮಾತ್ರ ಉಪಯೋಗಿಸುತ್ತಿದ್ದರು.

ಮಠದಲ್ಲಿ ನಿರಂತರ ದಾಸೋಹ ನಡೆಸುತ್ತಾ ಬಂದಿದ್ದರಿಂದಲೆ ಈ ಮಠಕ್ಕೆ "ದಾಸೋಹಮಠ" ಎಂದು ಕರೆಯುತ್ತಾರೆ. ಹೀಗೆ ದಾಸೋಹಮಠ ಎಂದು ಹೆಸರಿರುವುದು ಮಠಗಳಲೆಲ್ಲಾ ಅಪರೂಪ, ಸಾರಿಗೆ ಸಂಪರ್ಕದ ವ್ಯವಸ್ಥೆ ಈಗಿನಂತೆ ಹೆಚ್ಚಾಗಿ ಇರದ ಆ ಕಾಲದಲ್ಲಿ ಕಾಲು ನಡಿಗೆಯಿಂದಲೂ ಇಲ್ಲವೇ ಬಂಡಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಹೀಗೆ ಪ್ರಯಾಣ ಮಾಡುವವರು ರಾತ್ರಿ ವಸ್ತಿ ಮಾಡುವ ಸಂದರ್ಭ ಬಂದರೆ ಮಠಕ್ಕೆ ಬರುತ್ತಿದ್ದರು ಹಾಗೆ ಬಂದವರಿಗೆ ಪ್ರಸಾದ ಎತ್ತುಗಳಿಗೆ ಮೇವು ನೀರು ಇರಲು ಆಶ್ರಯ ಮಠದಲ್ಲಿ ದೊರೆಯುತ್ತಿತ್ತು.

ಮಠಕ್ಕೆ ಎಷ್ಟೇ ಜನ ಬಂದರೂ ಪ್ರಸಾದದ ವ್ಯವಸ್ಥೆ ಇರುತಿತ್ತು. ಮಠದಲ್ಲಿನ ಪ್ರಸಾದದಿಂದ ಸದ್ಬುದ್ಧಿ ವಿವೇಕ ಉಂಟಾಗಿ ಜ್ಞಾನೋದಯ ಆಗುತ್ತಿತ್ತು. ಯಾರೇ ಬಂದರೂ ಆತ್ಮೀಯತೆಯಿಂದ ಕಾಣುತ್ತಿದ್ದರು.ಬಡವ ಬಲ್ಲಿದನೆಂಬ ವ್ಯತ್ಯಾಸವಿಲ್ಲದೇ ನೋಡುತ್ತಿದ್ದರು.ಸ್ವಾಮಿಗಳವರ ಅಕ್ಕ ಶ್ರೀಮತಿ ಶಂಕ್ರಮ್ಮ ಚಿಕ್ಕ ವಯಸ್ಸಿಗೆ ಪತಿಯನ್ನು ಕಳೆದುಕೊಂಡು ದು:ಖಿತಳಾಗಿದ್ದರೂ ಅದನ್ನೆಲ್ಲಾ ಮರೆತು ಮಠದಲ್ಲಿ ಆಹೋರಾತ್ರಿ ಸೇವೆ ಗೈಯುತ್ತಿದ್ದಳು ತಾಯಿಯಾಗಿ, ಅಕ್ಕಳಾಗಿ ಶ್ರೀಗಳವರನ್ನು ಚಿಕ್ಕಂದಿನಿಂದಲೇ ಜೋಪಾನ ಮಾಡಿ ಬೆಳೆಸಿದ ಕೀರ್ತಿ ಶ್ರೀಮತಿ ಶಂಕ್ರಮ್ಮನವರಿಗೆ ಸಲ್ಲುತ್ತದೆ ಮಠದ ಆಧಾರ ಸ್ಥಂಭದಂತಿದ್ದು, ಮಠದ ಆಸ್ತಿಯನ್ನು ಜೋಪಾನವಾಗಿ ನೋಡಿಕೊಳ್ಳುತ್ತಾ ಪೂಜ್ಯರಿಗೆ ಯಾವುದೇ ಬಾರವಾಗದ ರೀತಿಯಲ್ಲಿ ಅಪಾರ ಕಕ್ಕುಲತೆಯಿಂದ ಶ್ರೀಗಳವರನ್ನು ಕಂಡ ತಾಯಿ ಈಕೆ ಅದೇ ರೀತಿ ಸಿದ್ರಾಮಮ್ಮ ಸಹ ಈ ಮಠದ ಅಭಿವೃದ್ಧಿಗೆ ಜೀವನವನ್ನೆ ಸವೆಸಿದಳು ತೆಗ್ಗಿನಮಠದ ಶ್ರೀ ಶಿವಶಂಕರಯ್ಯ ತೆಗ್ಗಿನಮಠದ ಶ್ರೀ ಪಂಚಾಕ್ಷರಯ್ಯನವರು ಅನೇಕರು ಸೇವಾ ಮನೋಭಾವದಿಂದ ಯಾವ ಫಲಾಪೇಕ್ಷೆ ಇಲ್ಲದೇ ಮಠದ ಅಭಿವೃದ್ಧಿಗೆ ದುಡಿದಿದ್ದಾರೆ. ಇವರ ಸೇವೆ ಸಹ ಚಿರಸ್ಮರಣೀಯ.

**ಅಂತ: ಕರುಣಾವತಾರಿ**

ಹಲವಾರು ವಾತ್ಸಲ್ಯಪೂರ್ಣ ಕಾರ್ಯಗಳನ್ನು ಅಭಿಮಾನದಿಂದ ಮಾಡುತ್ತಿದ್ದದುಂಟು ಶ್ರೀಗಳವರಿಗೆ ಇಷ್ಟವಾಗುವಂತಹ ಕೆಲವು ಕಾರ್ಯಗಳೆಂದರೆ ಅಳುವ ಮಕ್ಕಳನ್ನು ಸಂತೈಸುವುದು.ಮಕ್ಕಳೊಂದಿಗೆ ಆಟ–ಪಾಠ ಹಸಿದ ಕಂಗೆಟ್ಟ ಜಂಗಮ ಭಕ್ತ ಹಾಗೂ ಬಿಕ್ಷುಕರ ರೂಪದಲ್ಲಿ ಬರುವವರು ಯಾರೇ ಇದ್ದರೂ ಅವರನ್ನು ಸಂತೈಸುವ ಗುಣಅವರದಾಗಿತ್ತು. ಹಣ್ಣಿನ ಕಾಲ ಬಂದರೆ ಮಟ್ಟಿಗಟ್ಟಲೇ ಹಣ್ಣುಗಳನ್ನು ಖರೀದಿಸುತ್ತಿದ್ದರು. ಆದರೆ ತಮಗಾಗಿ ಅಲ್ಲ. ಹೋಳಿಗೆ ಮಾಡಿಸಿ ಮಾವಿನ ಹಣ್ಣುಗಳ ಸಿಹಿಕರಣಿ ಮಾಡಿಸಿ ಜಂಗಮರನ್ನು ಆ ಸಂದರ್ಭದಲ್ಲಿ ಕರೆಯಿಸಿ, ಚರ ಪಟ್ಟಾಧಿಕಾರಗಳನ್ನು ಬರಮಾಡಿಸಿಕೊಂಡು ಅವರಿಗೆ ಎಡೆಬಡಿಸಿ ಅವರು ತೃಪ್ತಿ ಪಟ್ಟನಂತರವೇ ತಾವು ಮಾವಿನ ಹಣ್ಣಿನಸಿಹಿಕರಣಿಯನ್ನು

ಸ್ವೀಕರಿಸುವ ಪದ್ಧತಿ ಈಗಲೂ ಇದುಪರಂಪರೆಯಾಗಿ ಬೆಳೆದುಬಂದಿದೆ ಈ ಮಹಾತ್ಮನ ಪುಣ್ಯ ತಿಥಿಯ ದಿವಸವೇ ಆ ಪರಂಪರೆ ಉಳಿಸುವ ದಿವಸವನ್ನಾಗಿ ಮಾಡಿದ್ದಾರೆ.ಶ್ರೀಗಳವರು ಮತ್ತೊಂದು ರೀತಿಯಲ್ಲಿ ಹಣ್ಣುಗಳನ್ನು ಖರೀದಿಸಿ ಆಡುವ ಮಕ್ಕಳಿಗೆ ಹಂಚಿ ಸಂತೋಷ ಪಡುವ ಪದ್ಧತಿಗೆ ಮಕ್ಕಳ ಮೇಲಿನ ಅವರ ಪ್ರೀತಿಯೇ ಸಾಕ್ಷಿ. [೧]

### ೬.೪ ಅನಾಥರಿಗೆ ಆಶ್ರಯ

ಎಲ್ಲಿಯೂ ಸಲ್ಲದವರಯ ಇಲ್ಲಿ ಸಲ್ಲುವರಯ್ಯ ಎಂಬ ನುಡಿಯಂತೆ ಮೂಲತ: ಹುಬ್ಬಳ್ಳಿಯವನಾದ ಕಪ್ಪೆ ನಿಂಗಪ್ಪ ನಾಟಕ ಕಂಪನಿಯಲ್ಲಿ ನಾಟಕ ಮಾಡುತ್ತಾ ಹರಪನಹಳ್ಳಿಯಲ್ಲಿ ಅನೇಕ ವರ್ಷಗಳಿಂದ ಸಾಳೇರ ಓಣಿಯಲ್ಲಿ ನೆಲೆಸಿದ್ದ ಚಿಕಿತ್ಸೆ ಫಲಕಾರಿಯಾಗಲಿಲ್ಲ. ಹಾವಾಡಿಗನಾದ ನಿಂಗಪ್ಪ ಸೋಮವರ ಬೆಳಿಗ್ಗೆ ೧೨.೦೨.೨೦೦೬ರಂದು ಬೆಳಿಗ್ಗೆ ಪಟ್ಟಣದ ಬೆಸ್ಕಾಂ ಕಾಲೋನಿಯ ಮನೆಯೊಂದರಲ್ಲಿ ಹಾವೊಂದನ್ನು ಹಿಡಿದು ಅಲ್ಲಿಯ ಜನರನ್ನು ಭೀತಿಯಿಂದ ಪಾರುಮಾಡಿದ  ಹಿಡಿದ ಹಾವನ್ನು ಇಲ್ಲಿಯ ಶ್ರೀಕೋಟೆ ಆಂಜನೇಯಸ್ವಾಮಿ ದೇವಸ್ಥಾನ ಬಳಿ ಇರುವ ಮೈದಾನದಲ್ಲಿ ಬಿಟ್ಟು ಬರುವಾಗ ಅದೇ ಹಾವು ನಿಂಗಪ್ಪನನ್ನು ಕಚ್ಚಿತು. ಅಸ್ವಸ್ಥಗೊಂಡ ನಿಂಗಪ್ಪನನ್ನು ತಕ್ಷಣವೇ ಅಲ್ಲಿನ ಸಾರ್ವಜನಿಕ ಆಸ್ಪತ್ರೆಗೆ ಕರೆತರಲಾಯಿತು. ಆದರೆ ಚಿಕಿತ್ಸೆ ಫಲಕಾರಿಯಾಗಲಿಲ್ಲ.

ಹರಪನಹಳ್ಳಿ ಹಾಗೂ ಸುತ್ತ ಮುತ್ತಲ ಸಹಸ್ರಾರು ಹಾವುಗಳನ್ನು ಹಿಡಿದು ನೂರಾರು ಜೀವಿಗಳನ್ನು ಸಾವಿನ ದವಡೆಯಿಂದ ಪಾರುಮಾಡಿ ಅವರ ಪಾಲಿಗೆ ಸಂಜಿವಿನಿ ಎನಿಸಿದ್ದ ಅನೇಕ ವರ್ಷಗಳಿಂದ ಇಲ್ಲಿನ ತೆಗ್ಗಿನ ಮಠದಲ್ಲಿ ಆಶ್ರಯ ಪಡೆದಿದ್ದ ಈತನಿಗೆ ಸುಮಾರು ೮೨ ವರ್ಷಗಳಾಗಿರಬಹುದು. ಆದರೂ ವೃದ್ಧ ವಯಸ್ಸಿನಲ್ಲಿ ಸಮಾಜ ಸೇವೆಗೆ ಮುಂದಾಗಿದ್ದನೆಂದರೆ ಆಶ್ಚರ್ಯಪಡುವಂತಹ ಸಂಗತಿಯೇ ಆಗಿದೆ.

ಈತನ ಇನ್ನೋಂದು ವಿಶೇಷವೇನೆಂದರೆ ಒಂದರ ಮೇಲೊಂದರಂತೆ ಮೂವತ್ತು ಸಣ್ಣ ಕಪ್ಪೆಗಳನ್ನು ನುಂಗಿ ಮತ್ತೇ ಹೊರಗೆ ತೆಗಿಯುತ್ತಿದ್ದನು.ಅದಕ್ಕಾಗಿ ಈತನಿಗೆ ಕಪ್ಪೆ ನಿಂಗಪ್ಪ ಎಂದು ಜನರು ಕರೆಯುತ್ತಿದ್ದರು.

ಈತನಿಗೆ ಮಕ್ಕಳಿಲ್ಲ ಇದ್ದ ಹೆಂಡತಿ ಹುಬ್ಬಳ್ಳಿ ಸೇರಿಕೊಂಡಿದ್ದು ಒಬ್ಬಂಟಿಗನಾಗಿ ಹರಪನಹಳ್ಳಿಯಲ್ಲಿಯೇ ವಾಸವಾಗಿದ್ದ ಅನೇಕ ಕಡೆಗಳಲ್ಲಿ ನಿಂಗಪ್ಪನ ಸಾಹಸಗಳನ್ನು ನೋಡಿ ಸಂಘ, ಸಂಸ್ಥೆಗಳು ಸನ್ಮಾನಿಸುತ್ತಿದ್ದವು.

### ಸ್ವಾಭಿಮಾನಿ ನಿಂಗಪ್ಪ

ಪ್ರತಿವರ್ಷ ಸಾಮೂಹಿಕ ವಿವಾಹಕ್ಕೆ ಬಳಸಿಕೊಳ್ಳಲು ತೆಗ್ಗಿನಮಠ ಗ್ರಾಮೀಣ ವಿಕಾಸ ಟ್ರಸ್ಟ್‌ಗೆ ನಿಂಗಪ್ಪ ರೂ ೫,೦೦೦=೦೦ ಗಳನ್ನು ಠೇವಣಿ ಇಟ್ಟಿದ್ದನೆಂದು ತಿಳಿದಿದೆ. ಅಂತ್ಯ ಸಂಸ್ಕಾರಕ್ಕೂ ಠೇವಣಿಒಬ್ಬಂಟಿಗನಾದ ನಿಂಗಪ್ಪ ವಿಧಿವಶನಾದರೆ ತನ್ನ ಶವಸಂಸ್ಕಾರಕ್ಕೆ ಇರಲೆಂದು ರೂ ೫,೦೦೦=೦೦ಗಳನ್ನು ಸಹ ಪಟ್ಟಣದ ಫಂಡ್ ಆಫೀಸಿನಲ್ಲಿ ಠೇವಣಿ ಇಟ್ಟಿದ್ದನು. ಸಾವಿರಾರು ಹಾವು

ಹಿಡಿದು ಅನೇಕರ ಜೀವನ ಉಳಿಸಿದ ಕಪ್ಪೆ ನಿಂಗಪ್ಪ ಹಾವಾಡಿಗನಾದ ನಿಂಗಪ್ಪ ಸೋಮವಾರ ಬೆಳಿಗ್ಗೆ ೧೨.೦೨.೨೦೦೭ರಂದು ಬೆಳಿಗ್ಗೆ ಪಟ್ಟಣದ ಬೆಸ್ಕಾಂ ಕಾಲೋನಿಯ ಮನೆಯೊಂದರಲ್ಲಿ ಹಾವೊಂದನ್ನು ಹಿಡಿದು ಅಲ್ಲಿಯ ಜನರನ್ನು ಭೀತಿಯಿಂದ ಪಾರುಮಾಡಿದ ಹಿಡಿದ ಹಾವನ್ನು ಇಲ್ಲಿಯ ಶ್ರೀಕೋಟೆ ಆಂಜನೇಯಸ್ವಾಮಿ ದೇವಸ್ಥಾನ ಬಳಿ ಇರುವ ಮೈದಾನದಲ್ಲಿ ಬಿಟ್ಟು ಬರುವಾಗ ಅದೇ ಹಾವು ನಿಂಗಪ್ಪನನ್ನು ಕಚ್ಚಿತು. ಅಸ್ವಸ್ಥಗೊಂಡ ನಿಂಗಪ್ಪನನ್ನು ತಕ್ಷಣವೇ ಅಲ್ಲಿನ ಸಾರ್ವಜನಿಕ ಆಸ್ಪತ್ರೆಗೆ ಕರೆತರಲಾಯಿತು. ಆದರೆ ಚಿಕಿತ್ಸೆ ಫಲಕಾರಿಯಾಗಲಿಲ್ಲ. ಕೊನೆಗೆ ಹಾವಿಗೆ ಬಲಿಯಾಗಿದ್ದು ವಿಪರ್ಯಾಸವೇ ಹೀಗೆ ಕಪ್ಪೆ ನಿಂಗಪ್ಪನಿಗೆ ಅಷ್ಟೇ ಅಲ್ಲದೇ ತೆಗ್ಗಿನಮಠ ಹಲವಾರು ಅನಾತರಿಗೆ ಆಶ್ರಯತಾಣವಾಗಿದೆ.[೨]

## ತೆಗ್ಗಿನಮಠದ ಸಾಹಿತ್ಯಸೇವೆ : (ಪ್ರಕಾಶನಗಳು)

"ಪಾರಂಪರಿಕ ಮಠಗಳಂತೆ ಈ ಮಠವೂ ಸಾಹಿತ್ಯ ಕ್ಷೇತ್ರಕ್ಕೆ ಮಹತ್ತರವಾದ ಕೊಡುಗೆಯನ್ನು ನೀಡಿದೆ. ಈ ಹಿಂದಿನ ಸ್ವಾಮಿಗಳಾಗಿದ್ದ ಚಂದ್ರಶೇಖರ ಶಿವಾಚಾರ್ಯರು ಸಾಹಿತ್ಯ ಪ್ರೇಮಿಗಳಾಗಿದ್ದರು. ಇವರ ನೇತೃತ್ವದಲ್ಲಿ ಹರಪನಹಳ್ಳಿಯಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಆಯೋಜಿಸಲಾಗಿತ್ತು. ಪೂಜ್ಯರು ಸ್ವತ:ಆಧ್ಯಾತ್ಮಿಕ ಲೇಖನಗಳನ್ನು ಬರೆಯುತ್ತಿದ್ದರು. ಮಾತ್ರವಲ್ಲದೇ ಆಧ್ಯಾತ್ಮಿಕದ ಬಗೆಗೆ ಅಧಿಕಾರವಾಣಿಯಿಂದ ಉಪನ್ಯಾಸಗಳನ್ನು, ಪ್ರವಚನಗಳನ್ನು, ನೀಡುತ್ತಿದ್ದರು. ಆ ಸಂದರ್ಭದಲ್ಲಿ "ಶ್ರೀ ಜಗದ್ಗುರು ರೇಣುಕಾಚಾರ್ಯ ಪ್ರಕಾಶನ ಸಂಸ್ಥೆ" ಎಂಬ ಸಂಸ್ಥೆಯನ್ನು ತೆರೆದು ತಮ್ಮ ಮುಖವಾಣಿ ಮತ್ತು ಇತರ ಗ್ರಂಥಗಳನ್ನು ಅದರ ಮೂಲಕ ಹೊರ ತಂದಿದ್ದಾರೆ ಅವುಗಳ ವಿವರಗಳು ಇಂತಿವೆ.

೧. ಶ್ರೀ.ಜಗದ್ಗುರು ವೀರಗಂಗಾಧರ ಪುರಾಣ: ಶ್ರೀ ಬಾಲಚಂದ್ರಶಾಸ್ತ್ರಿ ಹಿರೇಮಠ ಚಿಕ್ಕಮಣ್ಣೂರು
೨. ಹ್ಯಾಮ್ಲೇಟ್ ಕಾವ್ಯಕುಡಿ (ಕವನಸಂಕಲನ): ಶ್ರೀ ಬಾಲಚಂದ್ರಶಾಸ್ತ್ರಿ ಹಿರೇಮಠ ಚಿಕ್ಕಮಣ್ಣೂರು.
೩. ವೀರಶೈವರಿಗೆ ಶಿವಾಚಾರ್ಯರ ಕೊಡುಗೆ: ಡಾ.ಜ. ಚ. ನಿ. ನಿಡುಮಾಮಿಡಿ
೪. ನಿಗಮಾಗಮ ಮತ್ತು ವಚನಗಳ ಶಾಸ್ತ್ರಾರ್ಥ ದೃಷ್ಟಿ: ಡಾ. ವಿ. ಎಸ್. ಕಂಬಿ ಧಾರವಾಡ
೫. ವೀರಶೈವ ಅಧ್ಯಯನಗಳು: ಒಂದು ಸಂಶೋಧನೆ ಶ್ರೀ ಷಡಕ್ಷರಯ್ಯ ಪಾಲಾಪುರಮಠ ಗುಲ್ಬರ್ಗಾ
೬. ಶರನ್ನವರಾತ್ರಿ ಕಥಾಸಂಕಲನ ಶ್ರೀ ಎನ್. ಎಸ್. ಚಿದಂಭರರಾವ್ ಚನ್ನಗಿರಿ
೭. ಹರಪನಹಳ್ಳಿ ತಾಲೂಕು ಸ್ವಾತಂತ್ರ್ಯ ಹೋರಾಟಗಾರರು: ಶ್ರೀ ಹಿರೇಮಠದ ವೀರಭದ್ರಯ್ಯ ಹರಪನಹಳ್ಳಿ
೮. ವೀರಶೈವ ಧರ್ಮ ನಿಗಮಾಂತ ಮತ್ತು ಆಗಮಪುಣೀತ :ಡಾ. ವಿ. ಎಸ್. ಕಂಬಿ ಧಾರವಾಡ
೯. ವೀರಶೈವ ಧರ್ಮ ಗ್ರಂಥಗಳು : ಡಾ. ಮಲ್ಲಿಕಾರ್ಜುನ ಪರಡ್ಡಿ ಧಾರವಾಡ
೧೦. ಕ್ರಿಯಾಶೀಲ:ಸಂ.ಅ. ಸಿ.ಹಿರೇಮಠ ರಾಣೆಬೆನ್ನೂರು ಮತ್ತು ಎಂ. ಪಿ. ಎಂ. ಶಾಂತವೀರಯ್ಯ ಹರಪನಹಳ್ಳಿ

೧೧. ಜ್ಞಾನದೀವಟಿಗೆ :- ಪ್ರಸಂ.ಶ್ರೀ. ಅ. ಸಿ. ಹಿರೇಮಠ ಸಂ. ಎಂ. ಪಿ. ಎಂ. ಶಾಂತವೀರಯ್ಯ ಹರಪನಹಳ್ಳಿ

೧೨. ತೆಗ್ಗಿನಮಠದ ಶ್ರೀ ಚಂದ್ರಶೇಖರ ಶಿವಾಚಾರ್ಯ: ಎಂ. ಪಿ. ಎಂ. ಶಾಂತವೀರಯ್ಯ ಹರಪನಹಳ್ಳಿ

೧೩. ಚಂದ್ರಜ್ಞಾನಾಗಮ ವಿಚಾರಣೆ: ಪ್ರೋ. ಆರ್. ರಾಚಪ್ಪ

೧೪. ಸಂತರ ದೋಹೆಗಳು(ಭಾಷಾಂತರ) ಶ್ರೀ ಎಂ. ಚನ್ನಬಸವಗೌಡರು.

೧೫. ಕಾರ್ತಾರನ ಕ್ರಾಂತದೃಷ್ಟಿ: ಡಾ. ಎಸ್. ಎಂ. ಗಂಗಾಧರಯ್ಯ

೧೬. The Divine Light :shri.sha .Bra. Chandramoulishwar Shivacharyaru, pro: A.C.Chikkamath

ಇವುಗಳಲ್ಲದೇ ಹರಪುರಿಯ ಸುಪ್ರಸಿದ್ದ ತೆಗ್ಗಿನಮಠದ ಸಿದ್ಧಾಂತ ಪಂಚಾಂಗಗಳು ವಾರ್ಷಿಕ ನಿಯತಕಾಲಿಕವಾಗಿ ಪ್ರಕಟಗೊಳ್ಳುತ್ತಿವೆ.[3]

## ಶ್ರೀಗಳವರ ಹಿರಿಮೆ: (ಗೌರವಧಾರಗಳು)

ಸಾಹಿತ್ಯ ಸಂಸ್ಕೃತಿ ವರ್ಧನೆಗೆ ಶ್ರೀ ಮಠವೂ ಯಾವತ್ತೂ ಕಟಿಬದ್ಧವಾಗಿ ನಿಂತಿದೆ.ಶ್ರೀಗಳವರ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಸಂದ ಗೌರವಗಳು ಅಪಾರ• ಜನಸಮುದಾಯದ ಏಳಿಗೆಗೆ ಸದ್ಭಕ್ತರಿಂದ ಅಭಿನಂದನೆಯ ಮಹಾಪೂರ ಇದ್ದೇ ಇರುತ್ತದೆ. ಇದರ ರಚನಾತ್ಮಕ ಕಾರ್ಯಕ್ರಮಗಳನ್ನು ಹಲವಾರು ಸಂಘಟನೆಗಳು ಗೌರವಿಸಿವೆ. ವೀರಶೈವ ಧರ್ಮದ ಪ್ರಚಾರಕ್ಕೆ ಅವರು ಕೈಗೊಂಡ ಕಾರ್ಯಕ್ರಮಗಳನ್ನು ವೀರಶೈವ ಸದ್ಭಕ್ತರು ಶ್ಲ್ಯಾಗಿಸಿದ್ದಾರೆ. ಒಂದು ಸಂಸ್ಥೆಯನ್ನು ಕಟ್ಟಿ ಕೆವಲ ಕಲವೇ ವರ್ಷಗಳಲ್ಲಿ ಅದನ್ನು ರಾಷ್ಟ್ರ ಮಟ್ಟಕ್ಕೇರಿಸುವ ಅವರ ಸಂಕಲ್ಪ ಶಕ್ತಿ ಹಿರಿದು. ನಿರಂತರ ಅಧ್ಯಯನ ಶೀಲತೆ ತಾತ್ವಿಕ ದೃಷ್ಟಿಕೋನಗಳು ಬದುಕಿನ ಬಗೆಗಿರುವ ಒಳನೋಟಗಳು ಮತ್ತು ಜೀವನಾನುಭವಗಳು ಪುಟವಿಟ್ಟು ಅವರ ಯಶಸ್ಸನ್ನು ಸಾರುತ್ತಿವೆ.

ಶ್ರೀಗಳವರು ಕ್ರಿಯಾಶೀಲತೆಯನ್ನು ಮೆಚ್ಚುತ್ತಾರೆ, ಗೌರವಿಸುತ್ತಾರೆ. ಕ್ರಿಯಾಶೀಲತೆ ಇದ್ದಲ್ಲಿ ಯಶಸ್ಸು ಇರುತ್ತದೆ ಎಂಬ ತಾರಕ ಮಂತ್ರ ಅವರದು ಅವರಿಗೆ ಸೋಮಾರಿತನ ದಾರಿದ್ರ್ಯವೆಂದರೆ ಆಗದು ತಮ್ಮ ಮುಂದಿರುವ ಪೀಳಿಗೆಯನ್ನು ಅಭಿವೃದ್ಧಿ ಹೊಂದುತ್ತಿರುವ ವಿಶ್ವಕ್ಕೆ ಸಂವಾದಿಯಾಗಿ ಸಜ್ಜುಗೊಳಿಸುವ ಏಕಮೇವ ಸತ್ಸಂಕಲ್ಪ ಅವರದು  ಆ ನಿಟ್ಟಿನಲ್ಲಿ ಅವರು ನಿರ್ವಹಿಸಿದ ಕಾರ್ಯ ಅನನ್ಯವಾದುದು. ಅನುಪಮವಾದುದು,ಅದ್ವಿತಿಯವಾದುದು. ಇಂತಹ ಕ್ರಿಯಾಶಿಲತೆಯನ್ನು ಮೆಚ್ಚಿ ವಿವಿದ ಸಂಘಟನೆಗಳು ಅವರಿಗೆ ಬಿರುದು ಬಾವಲಿಗಳನ್ನು ನೀಡಿವೆ. ಈ ಹಿನ್ನೆಲೆಯಲ್ಲಿ ಅವರಿಗೆ ಸಂದ ಹತ್ತು ಹಲವು ಅಭಿದಾನಗಳಲ್ಲಿ ಮುಖ್ಯವಾದವುಗಳೆಂದರೆ

೧. ಶಿವಾಚಾರ್ಯ ರತ್ನ ಪ್ರಶಸ್ತಿ

೨. ಶ್ರೀ ಜಗದ್ಗುರು ಪಂಚಾಚಾರ್ಯ ಪ್ರಶಸ್ತಿ

೩. ಇಂಟರ್ ನ್ಯಾಷಿನಲ್ ಇಂಟಿಗ್ರೇಷನ್ ಸೋಸೈಟಿ ಮತ್ತು ಗ್ರೌಥ್ ಸೋಸೈಟಿ:-ರಷ್ಯ ವಿಕಾಸ್ ರಾಜಸ್ಥಾನ ಅವಾರ್ಡ

೪. ವಿದ್ಯಾಸಾಗರ ರತ್ನ ಎಂಬ ಪ್ರಶಸ್ತಿಯನ್ನ ಪಂಚಪೀಠಾಧೀಶ್ವರರ ಸಮ್ಮುಖದಲ್ಲಿ ಹಿರಿಯೂರಿನಲ್ಲಿ ಸನ್ಮಾನಿಸಲಾಯಿತು

ಹೀಗೆ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿಯೂ ಹೆಸರು ಪಡೆದವರಾಗಿದ್ದರು.

## ಇಂಡಿಯನ್ ಆರ್ಗನೈಜೇಷನ್ ಫಾರ್ ಕಾಮರ್ಸ್ ಇಂಡಸ್ಟ್ರೀ

ಲೈಫ್ ಟೈ ಹರ್ಮೆಂಟ್ ಅವಾರ್ಡ್ ಈ ಪ್ರಶ್ನೆಗಳನ್ನು ಪಡೆದು ಪ್ರಪ್ರಥಮ ಶಿವಾಚಾರ್ಯರು ಎಂಬ ಕೀರ್ತಿಗೆ ಇವರು ಭಾಜನರಾಗಿದ್ದಾರೆ. ಪರಮಪೂಜ್ಯ ಜಗದ್ಗುರು ವೀರಸೋಮೇಶ್ವರ ದೇಸೀ ಕೇಂದ್ರರು ಇವರ ಅಪರಿಮಿತ ಸೇವೆಯನ್ನು ಕೊಂಡಾಡಿದ್ದಾರೆ. ಅಲ್ಲದೇ ಚಂದ್ರಮೌಳೇಶ್ವರರಂತೆ ಉಳಿದ ಶಿವಾಚಾರ್ಯರು ಆದರ್ಶಗಳನ್ನು ದಿಟ್ಟ ಸಂಕಲ್ಪಗಳನ್ನು ರೂಡಿಸಿಕೊಂಡು ಅನುಷ್ಠಾನಗೊಳಿಸಬೇಕೆಂಬ ಮಾತುಗಳನ್ನು ಆಡಿದ್ದಾರೆ. ಇದು ಅವರಿಗೆ ಸಂದ ಅತ್ಯುತ್ಕೃಷ್ಠ ಗೌರವ ಅದೇ ವೇದಿಕೆಯಲ್ಲಿದ್ದ ಕನಾಟಕದ ಆಗಿನ ಮುಖ್ಯಮಂತ್ರಿ ಶ್ರೀ, ಎಸ್.ಎಂ. ಕೃಷ್ಣ ಅವರು ಶ್ರೀಗಳವರನ್ನು ಅಭಿನಂದಿಸಿ ಮಾಡಿದ ಭಾಷಣ ಶ್ರೀಚಂದ್ರಮೌಳೀಶ್ವರ ಶಿವಾಚಾರ್ಯ ಗುಣಗಾನ ಮಾಡುತ್ತಾ ಕ್ರಿಯಾಶೀಲತೆಗೆ ದಿಟ್ಟ ಹೋರಾಟಕ್ಕೆ ಸತ್ಸಸಂಕಲ್ಪಗಳ ಅನುಷ್ಠಾನಕ್ಕೆ ಶ್ರೀಗಳವರು ಇತರರಿಗೆ ಮಾದರಿಯಾಗಿದ್ದಾರೆ. ಶಿವಾಚಾರ್ಯರು ಜಾತ್ಯಾತೀತವಾದ ಮನಸ್ಸು ಪ್ರಗತಿಪರ ಚಿಂತನೆ ಅಭಿವೃದ್ಧಿ ಆಲೋಚನೆ ಸಮಾಜಮುಖಿ ಚಿಂತನೆಗಳನ್ನು ರೂಡಿಸಿಕೊಂಡವರಾಗಿರಬೇಕು. ಎಂಬ ಬಹು ದೊಡ್ಡ ಮಾತನ್ನು ಆಡಿದರೆ ಅದು ಅವರ ವ್ಯಕ್ತಿತ್ವದ ಪ್ರತಿಬಿಂಬವಾಗಿದೆ.[೩]

## ಅಧ್ಯಾಯ: ಏಳು

# ತೆಗ್ಗಿನಮಠ ಕುರಿತು ನಂಬಿಕೆ ಆಚರಣೆ ಸಂಪ್ರದಾಯಗಳು

**ನಂಬಿಕೆ**

ನಂಬಿಕೆ ಎಂದರೆ ಒಂದು ಹೇಳಿಕೆ ಅಥವಾ ವಸ್ತು ಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿ. ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ನಂಬಿಕೆಗಳು ಜನತೆಯ ಮನೋಭಾವ ಹಾಗೂ ಆದಿಮ ಸಂಸ್ಕೃತಿ ಮತ್ತು ಸಂಪ್ರದಾಯ, ಜನಪದ ನಂಬಿಕೆಗಳ ಉಗಮ, ಮುಖ್ಯವಾಗಿ ಧಾರ್ಮಿಕ, ಸಾಂಸ್ಕೃತಿಕ, ಹಾಗೂ ವೈಯಕ್ತಿಕ ನಂಬಿಕೆಗಳ ಭಯದಿಂದ ಹುಟ್ಟಿದವು. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷ ಭಯ ಈ ವರ್ಗದ ನಂಬಿಕೆಗಳ ಹುಟ್ಟಿಗೆ ಮುಖ್ಯ ಕಾರಣ. ದೇವತೆಗಳ ಆರಾಧನೆ ಕುಲದೇವತಾ ಪದ್ಧತಿಗಳು ಭೂತಾರಾಧನೆ ಇತ್ಯಾದಿಗಳಿಗೆ ಸಂಬಂಧಿಸಿದ ನಂಬಿಕೆಗಳು ಜನ ತಮ್ಮ ಸಂಸ್ಕೃತಿಯನ್ನು ರೂಪಿಸಿಕೊಳ್ಳುವಾಗ ಅವರ ಚಟುವಟಿಕೆಗಳಿಗೆ ತಕ್ಕಂತೆ ಕೆಲವು ನಂಬಿಕೆಗಳು ರೂಪತಾಳಿದವು. ವೈಯಕ್ತಿಕ ನಂಬಿಕೆಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ನಂಬಿಕೆಗಳ ಸಂಸ್ಕಾರದಿಂದ ಒಬ್ಬ ವ್ಯಕ್ತಿಯಲ್ಲಿ ಕಾಣಿಸಿಕೊಳ್ಳತ್ತದೆ.

ಒಂದು ಸಮುದಾಯದ, ಸಮಾಜದ ವ್ಯಕ್ತಿಗಳ ಪರಂಪರಾಗತವಾಗಿ ನಡೆಸಿಕೊಂಡು ಬರುವ ನಿರ್ಧಿಷ್ಟವಾದ ನೀತಿ ನಡತೆಗಳಿಗೆ ಆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಬದ್ಧನಾಗಿ ನಡೆದುಕೊಳ್ಳಬೇಕು. ಈ ನಡವಳಿಕೆಗಳಿಗೆ ಹೆಚ್ಚುಕಾಲ ರೂಢಿಗೆ ಬಂದಾಗ ಆಚಾರ ಎನಿಸಿಕೊಳ್ಳುತ್ತದೆ. ಈ ಆಚರಣೆಗಳಿಗೆ ನಿಯಮ ಸರಿ ತಪ್ಪುಗಳ ಭಾವನೆ ಮತ್ತು ಸೂಕ್ತ, ಸೂಕ್ತವಲ್ಲವೆಂಬ ನಿರ್ಬಂಧಗಳು ಸೇರಿಕೊಳ್ಳುತ್ತವೆ. 'ಆಚಾರ' ಎಂಬುದಕ್ಕೆ ನಡತೆ, ಶಿಷ್ಟಾಚಾರ, ಆಚರಿಸುವ ಪದ್ಧತಿ, ಪರಂಪರಾಗತವಾಗಿ ಒದಗಿಬಂದ ನಿಯಮಿತ ನಿತ್ಯ ಕರ್ಮಗಳು, ಸಂಪ್ರದಾಯಗಳು, ಪದ್ಧತಿ, ವಾಡಿಕೆ, ವಿದ್ಯುಕ್ತಕರ್ಮ ಹೀಗೆ ಹಲವಾರು ಅರ್ಥಗಳಿವೆ.

ಆಚಾರ ಮತಧರ್ಮಕ್ಕೆ ಸಂಬಂಧಸಿದ್ದು, ಎಲ್ಲ ಧರ್ಮಗಳಿಗೂ ಧರ್ಮಾಚರಣೆಗಳಿವೆ. ಕ್ರೈಸ್ಥ ಸಭೆಗಳಲ್ಲಿ ವಿವಿಧ ಆಚರಣೆಗಳಿವೆ. ಆಲಯದೊಳಗೆ ಶಿಲುಭೆಯನ್ನು ನಿಲ್ಲಿಸುವದು, ಮೇಣದ ಬತ್ತಿ ಹಚ್ಚುವದು, ಆರಾಧನೆಯ ಧೂಪ ಹಾಕುವದು, ಶಿಲುಬೆಗೆ ನಮಸ್ಕಾರ ಮಾಡುವದು, ಮೋಣಕಾಲೂರಿ ಪ್ರಾರ್ಥನೆ ಮಾಡುವದು ಸೂತ್ರ ಹಾಕಿಕೊಳ್ಳುವದು, ಸ್ತೋತ್ರ ಹೇಳುವುದು, ಹಾಗೆಯೇ ಹಿಂದೂ ಧರ್ಮದಲ್ಲಿಯೂ ವಿವಿಧವಾದ ಆಚರಣೆಗಳಿವೆ. ದೇವಸ್ಥಾನದೊಳಗೆ ಹೋದ ಮೇಲೆ ದೇವರನ್ನು ತೊಳೆಯುವದು, ದೇವರಿಗೆ ಹೂ ಮುಡಿಸಿ ಕಾಯಿ ಒಡೆದು ಊದುಬತ್ತಿ ಹಚ್ಚಿ ಪೂಜೆ ಮಾಡುವದು

ನಂತರ ಪ್ರಸಾದವನ್ನು ತೆಗೆದುಕೊಳ್ಳವರು. ಹೀಗೆ ಆಚರಣೆ ಬಗ್ಗೆ ತಿಳಿಯಲು ಹಲವಾರು ಉದಾಹರಣೆಗಳನ್ನು ಹೇಳಬಹುದು.

ಒಬ್ಬ ವ್ಯಕ್ತಿ ನಂಬುವ ತತ್ವಸಿದ್ಧಾಂತ ಮತ ಏನೇ ಇರಲಿ ಅವನ ಆಚರಣೆ, ಅನುಷ್ಠಾನ ನಿತ್ಯ ಜೀವನದಲ್ಲಿ ತನ್ನ ಕೆಲಸ ಕಾರ್ಯಗಳ ರೀತಿ ಇವು ಬಹಳ ಮುಖ್ಯ ಇಂಥ ಆಚರಣೆಯಿಂದಲೇ ಆತ ಧರ್ಮವನ್ನು ರಕ್ಷಿಸಿದಂತೆ ಆಗುವದು. ಆಚಾರ ಇಷ್ಟು ಮುಖ್ಯವಾದುದರಿಂದ ಭಾರತದಲ್ಲಿ ಪ್ರಾಚೀನಕಾಲದಲ್ಲೇ ಇದನ್ನು ನಿಯಮಿಸುವ ಧರ್ಮಶಾಸ್ತ್ರಗಳು ಜನ್ಮತಾಳಿದವು. ಇವುಗಳನ್ನು ಸ್ಮೃತಿ ಗುಂಪಿಗೆ ಸೇರಿಸಲಾಯಿತು. ಸ್ಮೃತಿಗಳೆಂದರೆ ಮಾನವನ ಸ್ಮೃತಿಗೆ ನೆನಪಿಗೆ ಗೋಚರವಾಗುವ ಪರಂಪರಾಗತವಾದ ಕಾರ್ಯ ಪದ್ಧತಿಗಳನ್ನು ವಿಶಧೀಕರಿಸುವ ಗ್ರಂಥಗಳು ಆಚರಣೆ, ನಿರೂಪಣೆಯಲ್ಲಿ ಹಲವು ವಿಷಯಗಳು ಬರುತ್ತವೆ. ಸಂಸ್ಕಾರಗಳು ಶುದ್ಧೀಕರಣ ಕರ್ಮಗಳು ನಾಲ್ಕು ವರ್ಣಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಸಂಕೀರ್ಣ ಜಾತಿಯವರು ಅನುಸರಿಸಬೇಕಾದ ಕರ್ಮಗಳು ನಾಲ್ಕು ಆಶ್ರಯ ಧರ್ಮಗಳು (ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಮತ್ತು ಸನ್ಯಾಸ) ಅನುಷ್ಠನ ಮಾಡಬೇಕಾದ ಕರ್ಮಗಳು, ವಿವಾಹ, ಸ್ತ್ರೀಯರ ಧರ್ಮ, ಆಹಾರನಿಯಮ, ಪಂಚಮಹಾಯಜ್ಞಗಳು, ಬ್ರಹ್ಮದೇವ, ಮಾನವ, ವ್ರತಗಳು ಮತ್ತು ತೀರ್ಥ ಕ್ಷೇತ್ರಗಳ ಸಂದರ್ಶನ ಮುಂತಾದವುಗಳು ಬರುತ್ತವೆ. ನಮ್ಮ ಜನಪದರ ಜಾತ್ರೆ (ಅಡ್ಡಪಲ್ಲಕ್ಕಿ) ಉತ್ಸವ ಮತ್ತು ಹಬ್ಬಗಳಲ್ಲಿ ಈ ಬಗೆಯ ನಿಯಮಿತವಾದ ಆಚರಣೆಗಳನ್ನು ನೋಡಬಹುದು.

ಆಚಾರದಲ್ಲಿ ಸಂಸ್ಕಾರಗಳು ಸೇರುತ್ತವೆ. ಇವುಗಳಲ್ಲಿ ಜನ್ಮಾರಬ್ಯದಿಂದ ಮರಣ ಪರ್ಯಂತ ಅನುಷ್ಠಾನ ಮಾಡಬೇಕಾದ ವಿಶೇಷ ಕರ್ಮಗಳು ಇವೆ. ಸಮಾಜವು ವ್ಯವಸ್ಥಿತವಾಗಿ ನಡೆಯಲು ಜನಪದರು ರೂಢಿಗೆ ತಂದ ಇಂತಹ ಆಚರಣೆಗಳಲ್ಲಿ ಕೆಲವು ನಂಬಿಕೆಗಳನ್ನು ತಮ್ಮ ತೆಕ್ಕೆಯಲ್ಲಿಟ್ಟುಕೊಂಡು ಬಂದವುಗಳಾಗಿವೆ. ಉದಾ: ದೇವರಿಗೆ ಕೋಳಿ, ಕುರಿ, ಕೋಣ ಗಳನ್ನು ಬಲಿಕೊಡುತ್ತಾರೆ. ಮೂರು ಕಲ್ಲಿಟ್ಟು ಪೂಜೆ ಮಾಡಿ ಕೋಳಿಬಾಯಿಗೆ ನೀರು ಬಿಟ್ಟು ಕೋಯಿದ ಮೇಲೆ ರಕ್ತವನ್ನು ಕಲ್ಲಿನ ಮೇಲೆ ಹಾಕಿದರೆ ದೇವರ ಹೆಸರು ಹೇಳಿದರೆ ದೇವರಿಗೆ ಸಲ್ಲುತ್ತದೆ.

ಜನಪದ ಗುಂಪು ನಿಸರ್ಗದಲ್ಲೇ ಜೀವಿಸುತ್ತಿದ್ದುದರಿಂದ ನಿಸರ್ಗದ ವ್ಯಾಪಾರಗಳನ್ನು ವಿಸ್ಮಯ ಭಯದಿಂದ ನೋಡಿ ನಿಸರ್ಗವನ್ನು ತನ್ನದೇ ಆದ ರೀತಿಯಲ್ಲಿ ಅರಿಯುವ ಪ್ರಯತ್ನ ಮಾಡಿತು. ಪ್ರತಿನಿತ್ಯ ಉದಯಿಸುವ ಮತ್ತು ಹಸ್ತಂಗತವಾಗುವ ಸೂರ್ಯ ಬೀಸುವ ಗಾಳಿ ಸುರಿಯುವ ಮಳೆಯ ಬಗ್ಗೆ ಜನಪದ ಗುಂಪು ಭಯ ವಿಸ್ಮಯವನ್ನು ತೋರಿ ಅವುಗಳಲ್ಲಿ ಅತಿಯಾದ ಶಕ್ತಿ ಇದೆ. ಎಂದು ಅವುಗಳನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿತು. ಇವುಗಳನ್ನು ಜನಪದರು ತನ್ನ ರಕ್ಷಣೆಗಾಗಿ, ಒಳಿತಿಗಾಗಿ, ಅಗೋಚರ ಶಕ್ತಿಯನ್ನು ಗಾಢವಾಗಿ ನಂಬಿ, ದೈವೀಕರಣಗೊಳಿಸಿ ಪೂಜಿಸುವ, ಆರಾಧಿಸುವ ಪರಂಪರೆ ಜಗತ್ತಿನ ಅನೇಕ ಜನಪದ ಗುಂಪುಗಳಲ್ಲಿ ರೂಡಿಗೆ ಬಂದಿತು.ಈ ನಂಬಿಕೆಗಳು ಕ್ರೀಯೆಯ ಮೂಲಕ ಆಚರಣೆಗಳಾಗಿ ಜನಪದ ಸಮುದಾಯದಲ್ಲಿ ವಿಶಿಷ್ಠ ಸ್ಥಾನವನ್ನು ಪಡೆದುಕೊಂಡವು.

ಆಚರಣೆ ಎಂಬ ಪದ ಇಂಗ್ಲೀಷಿನ ಖಣಣಚಿಟ ಎಂಬ ಪದಕ್ಕೆ ಸಂವಾದಿಯಾದುದು. ಖಣಣಚಿಟ ಎಂಬ ಲ್ಯಾಟಿನ್ ಮೂಲದ ಪದ ಇದರ ಅರ್ಥ ಸಂಪ್ರದಾಯ ಎಂದಿದೆ.

ಧಾರ್ಮಿಕ ಪಾವಿತ್ರ್ಯದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವು ಮಿಗಿಲಾದುದೇ ಆದುದರಿಂದ ಆಚರಣೆಗಳನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ. ನಡೆ ನುಡಿಯಲ್ಲಿ ಸಣ್ಣ ತಪ್ಪುಗಳಾದರೂ ಅನರ್ಥವಾದಿತೆಂಬ ಅಂಜಿಕೆ ಪ್ರತಿಯೊಂದು ಆಚರಣೆಯ ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ. ಉಪವಾಸವಿರುವದು ಮೀಸಲು ವಸ್ತುಗಳನ್ನು ತೆಗೆದಿಡುವದು ಹಿಂದಿನಿಂದ ನಡೆದು ಬಂದ ಪದ್ಧತಿಯಂತೆ ಸ್ವಲ್ಪವು ಲೋಪವಾಗದಂತೆ ಎಚ್ಚರವಹಿಸುವದು. ಸಂಬಂಧಪಟ್ಟ ವ್ಯಕ್ತಿಯಿಂದಲೇ ಕ್ರಿಯೆಗಳನ್ನು ನಡೆಸುವದು ಈ ಮುಂತಾದ ಕ್ರಿಯೆಗಳನ್ನು ಗಮನಿಸಿದಾಗ ಮತದ ಬಾಹ್ಯಾಚರಣೆಗಳಿಂದ ಇವು ಬದುಕಿನಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತವೆ. ಎಂಬುದೆ ವೇದ್ಯವಾಗುತ್ತದೆ.

ಆಚರಣೆಗಳಲ್ಲಿ ಮೂರು ಬಗೆಗಳಿವೆ. ೧) ಪ್ರಾರ್ಥನೆ ೨) ಅರ್ಪಣೆ ೩) ದೈಹಿಕ ಸಂಜ್ಞೆಗಳು ಮತ್ತು ಇತರೆ ಕ್ರಿಯೆಗಳು ಮದುವೆ, ಮುಂಜಿ ಗಳು, ಹಬ್ಬ ಹರಿದಿನಗಳ ಆಚರಣೆಗಳು, ಗೌರಿಹಬ್ಬದಲ್ಲಿವೆ. ಸುಮಂಗಲೆಯರು ಸ್ವಜಾತಿಯ ಅಥವಾ ಸ್ವಮತದ ಹಾಗೂ ಇತರೆ ಸುಮಂಗಲೆಯರಿಗೆ ಫಲ ತಾಂಬೂಲವನ್ನು ಕೊಡುವದು. ಸಂಕ್ರಾಂತಿ ಹಬ್ಬದಲ್ಲಿ ಎಳ್ಳು ಬೆಲ್ಲ ಹಂಚುವದು, ಹೋಳಿ ಹಬ್ಬದಲ್ಲಿ ಬಣ್ಣದ ಆಟ ಆಡುವದು ಯಾತ್ರಾ ಸ್ಥಳಗಳಿಗೆ ಹೋಗುವದು, ಶವಸಂಸ್ಕಾರ ಮಾಡುವದು ಇತ್ಯಾದಿ ಇವೆಲ್ಲಕ್ಕೂ ವೈಜ್ಞಾನಿಕ ಮನೋವೈಜ್ಞಾನಿಕ ಆಧಾರಗಳ ಜೊತೆಗೆ ನಂಬಿಕೆ ಪ್ರಭಲವಾಗಿರುತ್ತದೆ. ಇವುಗಳ ಆಚರಣೆಯಿಂದ ಮನಸ್ಸಿನಲ್ಲಿರುವ ಭಯ, ಭೀತಿಗಳು, ಅಪರಾಧಭಾವನೆಗಳು, ಸಂಶಯಗಳು ಬಿಡುಗಡೆಯಾಗಿ ಮನಸ್ಸಿಗೆ ನೆಮ್ಮದಿ ಉಂಟಾಗುತ್ತದೆ. ಮನುಷ್ಯ ತಾನು ನಡೆಸಿಕೊಂಡು ಬಂದ ವಿಶಿಷ್ಠ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹ, ನಂಬಿಕೆಗಳು, ಸಂಪ್ರದಾಯಗಳ ಸೃಷ್ಠಿಗೆ ಕಾರಣವಾದವು. ಇಂತಹ ಸಂಪ್ರದಾಯ ಆಚರಣೆಗಳು ತಲೆಮಾರಿನಿಂದ ತಲೆಮಾರಿಗೆ ಹರಿಯುತ್ತಾ ಬಂದವು. ಭಾರತದಲ್ಲೇ ಆಚರಣೆಯಲ್ಲಿರುವ ಬಹುತೇಕ ಹಬ್ಬಗಳು ಕೃಷಿಯ ಕ್ರಿಯಾಚರಣೆಯ ಹಿನ್ನೆಲೆಯಲ್ಲಿ ಮೂಡಿಬಂದವುಗಳಾಗಿವೆ. ಧಾರ್ಮಿಕ ಪಾವಿತ್ರ್ಯದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವು ಮಿಗಿಲಾದುದೆ ಆದುದರಿಂದ ಆಚರಣೆಯನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ.ನಡೆನುಡಿಯಲ್ಲಿ ಸಣ್ಣ ತಪ್ಪಾದರು ಅನರ್ಥವಾದಿತೆಂಬ ಅಂಜಿಕೆ ಪ್ರತಿಯೊಂದು ಆಚರಣೆಯ ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ. ಉಪವಾಸವಿರುವದು, ವಸ್ತುಗಳ ತೆಗೆದಿಡುವದು, ಹಿಂದಿನಿಂದ ನಡೆದು ಬಂದ ಪದ್ಧತಿಯಲ್ಲೇ ಸ್ವಲ್ಪವೂ ಲೋಪವಾಗದಂತೆ ಎಚ್ಚರವಹಿಸುವದು ಸಂಬಂಧಪಟ್ಟ ವ್ಯಕ್ತಿಯಿಂದಲೇ ಕ್ರಿಯೆಗಳನ್ನು ಗಮನಿಸಿದಾಗ ಬಾಹ್ಯಾಚರಣೆಗಳಾದ ಇವು ಬದುಕಿನಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತವೆ ಎಂಬುದು ವೇದ್ಯವಾಗುತ್ತದೆ. ಆಚರಣೆಗಳನ್ನು ವೈಯಕ್ತಿಕ ಎನ್ನುವದಕ್ಕಿಂತ ಸಾಮೂಹಿಕ ಎನ್ನಬಹುದು. ಏಕೆಂದರೆ ಆಚರಣೆಗಳ ಉದ್ದೇಶಗಳಲ್ಲಿ ವೈಯಕ್ತಿಕ ಕಥೆಯನ್ನು ಹೋಗಲಾಡಿಸಿ, ಸಾಮೂಹಿಕತೆಯನ್ನು ಸಂಸ್ಥಾಪಿಸುವದು ಒಂದು. ಅಲ್ಲದೇ

ತಾರ್ಕಿಕಾಸಕ್ತಿಯುಳ್ಳ ಹಾಗೂ ಕೆಲವು ದೈಹಿಕ ಅವಶ್ಯಕತೆಗಳನ್ನು ನೆರವೇರಿಸುವ ಕ್ರಿಯೆಗಳನ್ನು ಆಚರಣೆಗಳೆಂದೇ ಕರೆಯಲಾಗುವುದಿಲ್ಲ. ಆದರೆ ಕ್ರಿಯೆಗಳಿಗೆ ತಾರ್ಕಿಕಾಶಕ್ತಿಯ ಪವಿತ್ರೋದ್ದೇಶ ಕಾರಣವಾಗಿದ್ದರೆ ಆಗ ಅವು ಆಚರಣೆಗಳೆನಿಸಿಕೊಳ್ಳುತ್ತವೆ.

ಉದಾ: ನಮ್ಮ ಆರೋಗ್ಯ ರಕ್ಷಣೆಗಾಗಿ ನಿತ್ಯವು ಹೃದಯದ ಕೊಳೆಯನ್ನು ತೊಳೆದುಕೊಳ್ಳಲು ಮಾಡುವ ಸ್ನಾನ, ಆಚರಣೆ ಎನಿಸಿಕೊಳ್ಳುವುದಿಲ್ಲ. ಆದರೆ ಪುಣ್ಯ ಬರುತ್ತದೆ ಎಂಬ ತಾರ್ಕಿಕ ಉದ್ದೇಶದಿಂದ ಪುಣ್ಯ ಕ್ಷೇತ್ರಗಳಲ್ಲಿ ಮಾಡುವ ಸ್ನಾನ ಆಚರಣೆ ಎನಿಸಿಕೊಳ್ಳುತ್ತದೆ.

ಆಚರಣೆ ಎಂಬುದು ಪ್ರಾದಿಮ ಧಾರ್ಮಿಕ ಕ್ರಿಯೆಯ ಮುಂದುವರಿದ ರೂಪ ಅತೀಂದ್ರಿಯಶಕ್ತಿ ಅಥವಾ ಶಕ್ತಿಗಳಿಂದ ಅನುಗ್ರಹ ಲೋಸುಗ ಕೈಕೊಂಡ ಕ್ರಿಯೆ ಇದಾಗಿದೆ. ಕ್ರಮವತ್ತಾದ ವಿಧಿಪೂರ್ವಕವಾದ, ಪರಂಪರಾನುಗತವಾಗಿ ನಡೆದು ಬಂದ ರೀತಿಯಲ್ಲೇ ನಡೆಸುವ ಇಂಥ ಕ್ರಿಯೆಗಳ ಹಿನ್ನೆಲೆಯಲ್ಲಿ ನಂಬಿಕೆ ಆಳವಾಗಿ ಬೇರು ಬಿಟ್ಟಿರುತ್ತದೆ. ಧರ್ಮ ಇದರ ಅಡಿಗಲ್ಲು, ಧಾರ್ಮಿಕ ವಿಧಿಗಳಿಂದ ತಾನು ನಂಬಿದ ಪವಿತ್ರ ವಸ್ತುಗಳ ಪ್ರೀತಿಯನ್ನು ಸಂಪಾದಿಸಬಹುದೆಂದು ಮನುಷ್ಯ ಎಣಿಸುತ್ತಾನೆ. ಇದು ಕ್ರಮವತ್ತಾದ ಅರ್ಚನಾಕ್ರಮವೂ ಹೌದು. ತಾರ್ಕಿಕ ಹಿನ್ನೆಲೆಗಳಲ್ಲಿ ಸಂಪ್ರದಾಯ ನಿಷ್ಠೆರೀತಿಯಲ್ಲೇ ನಡೆಸುವ ಒಂದು ಕ್ರಿಯೆಯೂ ಹೌದು.

ಸಮಾಜದ ಎಲ್ಲಾ ಸ್ಥರಗಳಲ್ಲೂ ನಂಬಿಕೆ ಆಚರಣೆಗಳು ಅಸ್ತಿತ್ವದಲ್ಲಿವೆ. ಮಾನವನು ಸಮಾಜಕ್ಕೆ ಅದರ ಕಟ್ಟು ಕಟ್ಟಳೆಗಳಿಗೆ ಬದ್ಧನಾಗಿ ನಡೆದುಕೊಳ್ಳುವದರಿಂದ ಇವುಗಳಿಂದ ಹೊರತಾಗಿರಲು ಸಾದ್ಯವಿಲ್ಲ. ನಂಬಿಕೆ ಆಚರಣೆಗಳು ಬಹುತೇಕವಾಗಿ ಪ್ರಕೃತಿಮೂಲದವು. ಆದ್ದರಿಂದ ಇವುಗಳನ್ನು ದೈವಿಸಂಬಂಧದ ಸೃಷ್ಠಿ ಎನ್ನಬಹುದು. ಪ್ರಕೃತಿಯ ಮಡಿಲಲ್ಲೇ ಬದುಕಬೇಕಾಗಿದ್ದ ಆದಿ ಮಾನವ ಭಯ ಭಕ್ತಿಗಳಿಂದ ಮತ್ತು ಮನಸ್ಸಿನ ಅಸ್ಥಿರ ಭಾವನೆಗಳಿಂದ ದೈವಿಕ ನಂಬಿಕೆಗಳನ್ನು ಆಚರಣೆಯ ಕ್ರಮದಲ್ಲಿ ಉಳಿಸಿಕೊಂಡಿದ್ದಾರೆ.ಭಯ ಭಕ್ತಿಗಳನ್ನೊಳಗೊಂಡ ಆಚರಣೆಗಳು ಅನೇಕ ವಿಧಗಳಲ್ಲಿ ಅವುಗಳಿಗೆ ತೃಪ್ತಿಪಡಿಸುವ ಸಲುವಾಗಿಬೆಳೆದುಕೊಂಡು ಬಂದಿವೆ.

ಉದಾ: ಸತ್ತವರಿಗೆ ತಿಥಿ ಮಾಡದೇ ಹೋದರೆ ದೆವ್ವಗಳಾಗುತ್ತಾರೆ. ಹಾಳು ಬಿದ್ದ ಒಂದು ಬಾವಿಯಲ್ಲಿ ಮೂವರು ಬಿದ್ದು ಸತ್ತರೆ ಅಲ್ಲಿ ದೆವ್ವದ ಕಾಟ ಇದೆ ಅದಕ್ಕೆ ಶಾಂತಿ ಮಾಡಬೇಕು ಇಲ್ಲವಾದರೆ ಹಲವಾರು ಜನರನ್ನು ಅದು ಬಲಿತೆಗೆದುಕೊಳ್ಳತ್ತದೆ. ಎನ್ನುವ ನಂಬಿಕೆ ಇದೆ.

### ೭.೧ ಜೀವನಾವರ್ತನ ಆಚರಣೆಗಳು

ಶ್ರೀವೀರಭದ್ರೇಶ್ವರನ ಆಶೀರ್ವಾದ ಪಡೆದವರು ಮದುವೆಯ ಸಂದರ್ಭಗಳಲ್ಲಿ ದೇವರಿಗೆ ಉಲುಪಿಯನ್ನು ಕೊಡುತ್ತಾರೆ. ಇದರಲ್ಲಿ ಹೊಸಮರ, ಅಕ್ಕಿ, ಬೇಳೆ, ಬೆಲ್ಲ, ಹಿಟ್ಟು, ಕಾಯಿ, ಕೊಬ್ಬರಿಬಟ್ಟಲು, ಉತ್ತತ್ತಿ, ಅಡಿಕೆ, ಎಲೆ, ದಕ್ಷಿಣೆ ತೆಗೆದುಕೊಂಡು ವಾದ್ಯದೊಂದಿಗೆ ಮುತ್ತೈದೆಯರು ಕಳಸಕನ್ನಡಿಯನ್ನಿಡಿದು

ಪ್ರಪ್ರಥಮವಾಗಿ ಶ್ರೀವೀರಭದ್ರೇಶ್ವರ ದೇವಸ್ಥಾನಕ್ಕೆ ಹೋಗುತ್ತಾರೆ. ಕಾಯಿ, ಕರ್ಪೂರ ಮಾಡಿಸಿ ಮಂಗಾಳಾರತಿ ತೆಗೆದುಕೊಂಡು ಉದ್ಧರಿಸೆಂದು ಧೀರ್ಘದಂಡ ನಮಸ್ಕಾರಗಳನ್ನು ಸಲ್ಲಿಸುತ್ತಾ ಮನೆಗೆ ಹಿಂದಿರುಗುತ್ತಾರೆ. ಯಾವುದೇ ಮನೆಯಲ್ಲಿ ಮಂಗಳಕಾರ್ಯ ನಡೆದರೂ ಉಲುಪಿ ಕೊಟ್ಟು ಹರಕೆ ಮುಟ್ಟಿಸಿಆಶೀರ್ವಾದ ಪಡೆದು ಮನೆಗೆ ಬರುವ ಪದ್ಧತಿ ಇದೆ.

### ಮದುವೆಯ ಸಂದರ್ಭ

ಮದುವೆಯ ಸಂದರ್ಭದಲ್ಲಿ ಬೀಗರು ಬಂದು ಬೀಡು ಬಿಡುವುದೇ ಶ್ರೀ ಆಂಜನೇಯ ಹಾಗೂ ಶ್ರೀವೀರಭದ್ರೇಶ್ವರ ದೇವಸ್ಥಾನಗಳ ಆವರಣದಲ್ಲಿ. ಅವರಿಗೆ ಮೇಲೋಪಚಾರವೆಂದು ನೀರು ಕನ್ನಡಿ ಕೊಡುವುದು ಉಳಿದುಕೊಳ್ಳಲು ಸ್ಥಳ ತೋರಿಸುವದು ಇಲ್ಲಿಯೇ ನಂತರ ಮನೆಗೆ ಬಂದು ಸಿಹಿ, ಖಾರಗಳೊಂದಿಗೆ  ಟೀ, ಕಾಫಿ, ಪೇಯಗಳನ್ನು ತೆಗೆದುಕೊಂಡು ಉಪಚಾರ ಮಾಡಿಸಿ ಮುಂಭಾಗದಲ್ಲಿ ಎದುರುಗೊಳ್ಳಲು ಮುಹೂರ್ತ ಮಾಡಿಸಿ ಕಳಸ ಕನ್ನಡಿ ಇಡಿಸಿ ಉಪಚಾರದ ಮಾತುಗಳನ್ನಾಡುತ್ತಾರೆ.ತಾವು ಯಾರು ಎಲ್ಲಿಂದ ಬಂದಿದ್ದೀರಿ ತಾವು ಕುಶಲವಾಗಿದ್ದೀರಾ ಮರಳಿ ಎಲ್ಲಿಗೆ ಹೋಗುತ್ತೀರಿ. ಕನ್ನಡಿ ನೋಡಿಕೊಳ್ಳಿ ಸಿಗರೇಟ ಹಚ್ಚಿಕೊಳ್ಳಿ ಬಸ್ಮ ಧರಿಸಿಕೊಳ್ಳಿ ತಾಂಬೂಲ ತೆಗೆದುಕೊಳ್ಳಿ ಕಳಸ ಇಕ್ಕಿಸಿಕೊಳ್ಳಿ ಬದನೆಕಾಯಿ ಅಥವಾ ಮಂಡಕ್ಕಿ ಮತ್ತು ಉಳ್ಳಾಗಡ್ಡಿ ಸರ ಮಾಡಿಕೊಂಡು ಬಂದು ಸರ ಹಾಕಿಸಿಕೊಳ್ಳಿ ಎನ್ನುವ ರೂಡಿಯ ಆಡು ಭಾಷೆಯಿಂದ ನಗೆಯಾಡಿಸಿ ಎದುರುಗೊಂಡು ಮರಳಿ ಶ್ರೀವೀರಭದ್ರ ದೇವರ ಸನ್ನಿಧಾನಕ್ಕೆ ಹೋಗಿ ಧರ್ಶನ ಪಡೆದು ಮನೆಗೆ ಕರೆತರುತ್ತಾರೆ.

ಮದುವೆಯ ದಿನ ಉದಯಕ್ಕೆ ಸಹೋದರಮಾವನಾದವನು ಹಂದರ ಹಾಲುಗಂಭಳಿ ತಂದು ಇಲ್ಲಿಡಬೇಕು. ಇದಕ್ಕೆ ಉಲುಪಿ ಕೊಟ್ಟು ಪೂಜೆ ಮಾಡಿಸಿ ಆತನಿಗೆ ಬಳವಳಿ ಕೊಟ್ಟು ವಾದ್ಯಸಮೇತವಾಗಿ ಮನೆಗೆ ತೆಗೆದುಕೊಂಡು ಬರುವರು. ಅಂದಿನ ಉದಯಕ್ಕೆ ಪ್ರಥಮವಾಗಿ ಎಣ್ಣೆ ಬೀರುವ ಸಂಪ್ರದಾಯ, ಮೊದಲು ದೇವಸ್ಥಾನದ ತಲಬಾಗಿಲಿಗೆ ನಂತರ ಉಳಿದ ಬಾಗಿಲಗಳಿಗೆ ಹಚ್ಚುವರು. ನಂತರ ತಾಳಿ ಕಟ್ಟುವ ಮುನ್ನ ಮದುಮಗನ ಸಹೋದರಿ ಸ್ನಾನ ಮಾಡಿಸಿ ಹೊಸ ಉಡುಗೊರೆ ಕೊಟ್ಟು ದೇವಸ್ಥಾನಕ್ಕೆ ಕರೆದೊಯ್ದು ಎತ್ತನ್ನು ಹಿಡಿದು ಮುಂದೆ ನಂದಿ ಹಿಂದೆ ಮದುಮಗನ ಈ ರೀತಿಯಾಗಿ ಕರೆದೊಯ್ದು ದೇವಸ್ಥಾನದಲ್ಲಿ ಬಾಸಿಂಗ ಜೋಡಿಸಿ ಅಲ್ಲಿಂದ ಓಕಳಿ ನಿವಾರಿಸುತ್ತಾ ಮನೆಗೆ ಕರೆತಂದು ಮಾಂಗಲ್ಯಧಾರಣೆ ಮಾಡಿಸುವರು.

### ಜನನದ ಸಂದರ್ಭ

ಯಾವುದೇ ಮನೆಯಲ್ಲಿ ಮಗು ಜನನವಾದ ತಿಂಗಳು ತುಂಬುವುದರೊಳಗೆ ಇದೆ ರೀತಿಯಲ್ಲಿ ಹರಕೆಯನ್ನು ತೀರಿಸುತ್ತಾರೆ. ಉಲುಪಿ ಸಮೇತ ಮುತ್ತೈದೆಯರೊಡಗೂಡಿ ಮಗುವನ್ನು ತೆಗೆದುಕೊಂಡು ಹೋಗಿ ಅಡಗೆಡವಿ ದೇವಸ್ಥಾನದ ಭರಮಪ್ಪನಿಗೆ ಕಾಯಿ ಕರ್ಪೂರ ಮಾಡಿಸಿ ಮಂಡಕ್ಕಿ ಹಂಚಿ ಬರುವ ಪದ್ಧತಿಯಿದೆ.

## ಸೀಮಂತ ಮತ್ತು ನಾಮಕರಣ

ವ್ಯಕ್ತಿಯ ಬದುಕಿನ ಮೊದಲ ನಿಲ್ದಾಣವು ಜನನ ಆದರೆ ಇದಕ್ಕೂ ಮೊದಲೇ ಜೀವನ ಚಟುವಟಿಕೆ ಪ್ರಾರಂಭವಾಗುತ್ತದೆ. ತಾಯಿಯು ಗರ್ಭವತಿಯಾಗುತ್ತಲೆ ಮಗುವಿನ ದೇಹದ ವಿಕಾಸವು ಗರ್ಭವು ನಿಂತಕೂಡಲೇ ಪ್ರಾರಂಭವಾದರೆ ಜೀವನದ ಪ್ರವೇಶ ಶೀಶುವಿನ ದೇಹಕ್ಕೆ ಆರು ತಿಂಗಳು ತುಂಬಿದ ಮೇಲೆ ಪ್ರಾರಂಭವಾಗುತ್ತದೆ. ಆದ್ದರಿಂದ ಮಗುವು ಭೂಮಿಗೆ ಬರುವ ಪೂರ್ವದಲ್ಲಿಯೇ ಅದಕ್ಕೆ ಧಾರ್ಮಿಕ ಸಂಸ್ಕಾರ ಸಿಗಬೇಕು ತಾಯಿಯ ಮೂಲಕ ಗರ್ಭಸ್ಥ ಶಿಶುವು ಹೇಗೆ ಆಹಾರವನ್ನು ಪಡೆಯುತ್ತದೆಯೋ ಹಾಗೆಯೇ ಧರ್ಮ ಸಂಸ್ಕಾರ ಮಂತ್ರೋಪದೇಶ ಪಡೆಯಬೇಕು ಎನ್ನುವದೇ ಹಿಂದು ವೀರಶೈವ ಧರ್ಮದ ಮೂಲ ಸಿದ್ಧಾಂತ

ಈ ವಿಶೇಷ ಸಂಸ್ಕಾರ ಜಗತ್ತಿನ ಮತ್ತಾವುದೇ ಧರ್ಮದಲಿ ಇಲ್ಲ. ಇದು ವೀರಶೈವ ಸಮಾಜ ಬಿಟ್ಟು ಬೇರೆ ಯಾವ ಭಾರತೀಯ ಧರ್ಮದಲ್ಲೂ ಈ ಸಂಸ್ಕಾರವಿಲ್ಲ. ಮತ್ತು ಧರ್ಮ ಸಂಸ್ಕೃತಿ ನಶಿಸಿ ಹೋಗುತ್ತಿರುವ ಈ ಕಾಲದಲ್ಲಿ ಕೇವಲ ವಚನ ಸಾಹಿತ್ಯದ ಶರಣ ಸಂಸ್ಕಾರವಿರುವ ಮನೆತನಗಳಲ್ಲಿ ಮಾತ್ರ ಈ ಪದ್ಧತಿ ಆಚರಣೆಯಲ್ಲಿದೆ. ಇಂದಿನ ಆಧುನಿಕ ವಿಜ್ಞಾನವು ಮಗುವಿನ ಮನಸ್ಥಿತಿ ಬುದ್ಧಿಶಕ್ತಿ ಮುಂತಾದವುಗಳೆಲ್ಲವನ್ನು ತಾಯಿಯ ಮನಸ್ಥಿತಿ ಚಟುವಟಿಕೆ ಆಚಾರ ವಿಚಾರ ಹೆರಿಗೆ ಸಮಯದಲ್ಲಿ ಆಗುವ ವೇದನೆಗಳೆಲ್ಲವುಗಳ ಮೇಲೆ ಅವಲಂಭಿಸಿದೆ ಎಂದು ಹೇಳಬಹುದು. ತಾಯಿಯು ಗರ್ಭವತಿ ಇದ್ದಾಗ ಒಳ್ಳೆಯ ಚಿಂತನೆ ಅಧ್ಯಯನ ಮುಂತಾದವುಗಳಲ್ಲಿ ತೊಡಗಿ ಮನಸ್ಸಿನ ಸ್ಥಿತಿಯನ್ನು ಉತ್ತಮವಾಗಿ ಕಾಯ್ದುಕೊಂಡರೆ ಮಗುವು ಸಹ ಉತ್ತಮ ಸ್ವಭಾವದ್ದಾಗುವದು. ಇದಕ್ಕೆ ಪೂರಕವಾಗಲೆಂದು ಈ ಗರ್ಭಲಿಂಗಧಾರಣ ಅಳವಡಿಸಲಾಗಿದೆ.

### ಸೀಮಂತ

ಪ್ರಥಮ ಗರ್ಭಧಾರಣೆಯಾದ ಆರು ಅಥವಾ ಎಂಟನೇ ತಿಂಗಳಲ್ಲಿ ಮಾಡುವ ಶುಭ ಸಂಸ್ಕಾರ ಕಾರ್ಯವೇ ಸೀಮಂತಕಾರ್ಯ ಆರನೇ ತಿಂಗಳಲ್ಲಿ ಜೀವಾತ್ಮ ಸೇರುತ್ತದೆ. ದರ್ಭೆಯನ್ನು ಹಾಲನಲ್ಲಿ ಅರಿದು ತಾಯಿಯ ಮೂಗಿಗೆ ಸ್ವಲ್ಪ ಹಾಕಿದರೆ ಅದು ಮಗುವಿಗೆ ಸೇರುತ್ತದೆ. ಆಗ ಮಗುವಿಗೆ ಜ್ಞಾನೋದಯವಾಗುತ್ತದೆ. ಈ ಸೀಮಂತ ಮಾಡುವ ಉದ್ದೇಶ ತಾಯಿ ಮತ್ತು ಮಗು ಆಯುರಾರೋಗ್ಯ ಪಡೆಯಲಿ ಉತ್ತಮ ಸಂತಾನವಾಗಲಿ ನೂರ್ಕಾಲ ಬಾಳಲಿ ಎಂದು ಹಾರೈಸುವದೇ ಈ ಕಾರ್ಯದ ಉದ್ದೇಶವಾಗಿದೆ.

ಗರ್ಭಿಣಿಗೆ ಬೈತಲೆಯನ್ನು ತಗೆದು ವೀಣಾನಾದ ಪೂರಕವಾಗಿ ಮಂತ್ರವನ್ನು ಉಚ್ಚರಿಸಿದರೆ ಆ ನಾದವು ತರಂಗವಾಗಿ ಗರ್ಭಿಣಿಯ ಗರ್ಭವನ್ನು ಹೊಕ್ಕು ಅಲ್ಲಿರುವ ಪಿಂಡದಲ್ಲಿ ಚೇತನವು ಬಂದು ವೈದಿಕವಾಗುವದು. ಈ ಪಿಂಡವು ಮಗುವಾಗಿ ಈಚೆಗೆ ಬಂದಾಗ ಆ ಮಗುವಿನ ಬುದ್ಧಿಯೆ ವೈದಿಕ ಮಾರ್ಗದಲ್ಲಿ ಓಡುವದು ಆದ್ದರಿಂದ ಸೀಮಂತಶಾಸ್ತ್ರ ಮಾಡುವದು ಪ್ರಥಮ ಗರ್ಭ ಸಂಸ್ಕಾರದ ಮೂಲಕವಾಗಿ ಎಲ್ಲಾ ಗರ್ಭಗಳಿಗೂ ಸಂಸ್ಕರವಗಲೆಂದು ಸೀಮಂತಕಾರ್ಯದ ಉದ್ದೇಶವಾಗಿದೆ.

ಗರ್ಭವು ಸುದ್ದಿಯಾಗಿ ಯಾವ ತೊಂದರೆಯು ಇಲ್ಲದೆ ಹೆಂಡತಿಯ ಹೆರಿಗೆಯಾಗಲಿ ಎಂಬುದು ಉದ್ದೇಶ ಈ ಗಿಡ ಮರಗಳಿಗೆ ಹೊಸ ಹಸಿರು ಚಿಗುರಿ ಹೇಗೆ ಬರುತ್ತದೆಯೊ ಅದೇ ರೀತಿ ತಾಯಿಗೆ ಹಸಿರು ಸೀರೆ ಹಸಿರು ಖಣ ತೊಡಿಸಿ ಮಗುವನ್ನು ಸ್ವಾಗತಿಸುತ್ತಾರೆ. ಈ ಸೀಮಂತವು ಮಹಿಳೆಯರ ಧಾರ್ಮಿಕ ವಿಧಿಯ ಕಾರ್ಯವಾಗಿದೆ.ಗರ್ಭಿಣಿಯು ಎಷ್ಟು ಸಂತೋಷದಿಂದ ಇರುವಳೊ ಅಲ್ಲದೇ ಅವಳ ಮನಸ್ಸು ಒಳ್ಳೆಯ ಭಾವನೆಯಿಂದ ಒಳ್ಳಯ ಭಕ್ತಿ ಒಳ್ಳೆಯ ಉದ್ದೇಶವಿದ್ದರೆ ಇವು ಮಗುವಿನ ಮೇಲೆ ಪರಿಣಾಮ ಬೀರಿ ತೇಜಸ್ವಿಯೂ, ಧಾರ್ಮಿಕನೂ, ಪರೋಪಕಾರಿಯೂ, ದೇವಾಂತ ಭಕ್ತನೂ, ಆಚಾರಶೀಲನೂ, ವಿನಯಾದಿ ಸದ್ಗುಣ ಭರಿತನೂ ವಿದ್ಯಾಶೀಲನೂ ಈ ಎಲ್ಲಾ ಗುಣಗಳು ಇರುವಂಥ ಸುಂದರ ಮಗು ಜನಿಸುತ್ತದೆ.

**ಚೊಚ್ಚಲ ಹೆರಿಗೆಯ ಸಂದರ್ಭ**

ಪ್ರಥಮವಾಗಿ ಹೆರಿಗೆಯಾದಾಗ ತವರೂರಿನಿಂದ ಮಗುವನ್ನು ಕರೆತರುವಾಗ ಭಾವಮೈದುನನೂ ತೊಟ್ಟಿಲನ್ನು ಹೊತ್ತುಕೊಂಡು ಬಂದು ಸೆರುವದೇ ಆಂಜನೇಯ ಮತ್ತು ವೀರಭದ್ರ, ಬಸವಣ್ಣ ದೇವಸ್ಥಾನಗಳಲ್ಲಿ ಮಗುವಿನ ತಂದೆ ಮನೆಯವರು ವಾದ್ಯಗಳ ಜೊತೆ ಕಳಸ ಕನ್ನಡಿ ತೆಗೆದುಕೊಂಡು ಬಂದು ಕಾಯಿ ಕರ್ಪೂರ ಮಾಡಿಸಿ ಶ್ರೀವೀರಭದ್ರನ ಹೆಸರಿನಿಂದ ಕರೆಯಿಸಿ ನಂತರ ನಾಮಕರಣವನ್ನು ಮನೆಯಲ್ಲಿ ಮಾಡುವ ಪರಿಪಾಠವಿದೆ.

**ನಾಮಕರಣ**

ಜಾತ ಕರ್ಮವೆಂದರೆ ಜನನ ಅಥವಾ ಜನ್ಮಸಂಸ್ಕಾರ ಜನಿಸಿದಾಗ ನೆರವೇರಿಸುವ ಕ್ರಿಯಾವಿಧಾನವೇ ಜಾತಕರ್ಮ ಸಂಸ್ಕಾರವಾಗಿದೆ. ಜನಿಸಿದ ಮಗುವಿಗೆ ವಿಧಿಪ್ರಕಾರವಾಗಿ ಹೆಸರಿಡುವ ಸಂಸ್ಕಾರಕ್ಕೆ ನಾಮಕರಣವೆಂದು ಹೆಸರು ಮಗು ಜನಿಸಿದ ೮-೧೦ ದಿನಗಳಲ್ಲಿ ಸೂತಕ ನುವಾರಣೆಗಾಗಿ ಲಿಂಗಧಾರಣೆ ಮಾಡಿಸುವ ಕ್ರಮವಿದು. ಅಂದು ಮನೆಯನ್ನು ಗೋಮಯದಿಂದ ಸಾರಣಿ ಮಾಡಿ ತಳಿರು ತೋರಣಗಳಿಂದ ಸಿಂಗರಿಸಿ ಗುರುಗಳನ್ನು ಭಕ್ತಿಪೂರ್ವಕವಾಗಿ ಬರವಾಡಿಕೊಂಡು ಪೂಜಾಪರಿಕರಗಳನ್ನು ಸಿದ್ದಪಡಿಸಬೇಕಾಗುತ್ತದೆ. ಮಗು ಹಾಗೂ ಮಗುವಿನ ತಂದೆ ತಾಯಿಗಳಿಬ್ಬರು ಮಂಗಳಸ್ನಾನ ಮಾಡಿ ಗುರುವಿನ ಸನ್ನಿಧಿಯಲ್ಲಿ ಕುಳಿತುಕೊಳ್ಳಬೇಕು ಗುರುಗಳು ಪಂಚಸೂತ್ರ ಯುಕ್ತವಾದ ಲಿಂಗಕ್ಕೆ ಅಭಿಷೇಕಯುಕ್ತವಾದ ಲಿಂಗಕ್ಕೆ ಅಭಿಷೇಕ ಷೋಡಶೋಪಾಚಾರ ಮಾಡಿ, ಪೂಜೆಮಾಡಿ ಜಲದಿವಾಸ ಧಾನ್ಯ ದಿನಸುಗಳಿಂದ ಸಂಸ್ಕರಿಸಿ ಪುನಃ ಪದ್ಯಾದಿಮಂತ್ರಗಳಿಂದಲೂ ಮತ್ತು ಪಂಚಾಮೃತ ಮಂತ್ರಗಳಿಂದಲೂ ಪಂಚ ಬ್ರಹ್ಮ ಮಂತ್ರಗಳಿಂದಲೂ ಅಭಿಷೇಕ ಮಾಡಿ ಲಿಂಗಕ್ಕೆ ಪ್ರಾಣ ಪ್ರತಿಷ್ಠೆ ಮಾಡಿ ಶಿಶುವಿಗೆ ಭಸ್ಮವನ್ನು ಧರಿಸಿ, ರೇಷ್ಮೆ ಅಥವಾ ಕೆಂಪು ವಸ್ತ್ರದಲ್ಲಿ ಲಿಂಗವನ್ನು ಕಟ್ಟಿ ಮಂತ್ರ ಪೂರ್ವಕ ಗುರುಗಳು ಮಗುವಿನ ಕೊರಳಿಗೆ ಲಿಂಗವನ್ನು ಧರಿಸುತ್ತಾರೆ. ಅನಂತರ ಮಗುವಿನ ಬಲಕಿವಿಯಲ್ಲಿ ಪಂಚಾಕ್ಷರಿ ಮಂತ್ರವನ್ನು ಉಪದೇಶ ಮಾಡುತ್ತಾರೆ ಮತ್ತು ಒಂದು ಹನಿ ಗುರುಪಾದದ ಪಾದೋದಕವನ್ನು ಮಗುವಿನ ಬಾಯಲ್ಲಿ ಹಾಕುತ್ತಾರೆ ಆ ಮೇಲೆ ಮನೆಯವರೆಲ್ಲ ಗುರುಗಳ ಪಾದೋದಕ

ಪ್ರಸಾದ ಸಿಹಿ ಮಾಡಿಕೊಳ್ಳುತ್ತಾರೆ. ಇಷ್ಟದೇವರ ಹೆಸರನ್ನಾಗಲಿ ಜನ್ಮ ನಕ್ಷತ್ರವನ್ನನುಸರಿಸಿ ಆಗಲಿ ಇಲ್ಲವೇ ಮನೆಯ ಹಿರಿಯರ ಹೆಸರನ್ನಾಗಲಿ ಇಡುವದು ಶುಭ ಸಂಕೇತವೆನ್ನುವ ಭಾವನೆ ವೀರಶೈವರಲ್ಲಿದೆ. ಗುರುಗಳ ತಂದೆ ತಾಯಿಗಳು ಇಷ್ಟಪಡುವ ಹೆಸರನ್ನು ಅಲ್ಲಿ ನೆರೆದವರಿಗೆ ತಿಳಿಯಪಡಿಸುವ ಆ ಹೆಸರನ್ನೆ ಮಗುವಿನ ಬಲ ಕಿವಿಗೆ ಉಚ್ಚ ಸ್ವರದಿಂದ ಹೇಳುತ್ತಾರೆ. ಐದು ಸಲ ಹೇಳಿದ ನಂತರ ಮಗುವಿಗೂ ತಂದೆ ತಾಯಿಗಳಿಗೂ ಆಶೀರ್ವಾದ ಮಾಡುತ್ತಾರೆ. ಮಗುವನ್ನು ಹೂವಿನಿಂದ ಹಾಗೂ ಹೊಸ ಬಟ್ಟೆಗಳಿಂದ ಶೃಂಗರಿಸಿದ ತೊಟ್ಟಿಲಿಗೆ ಹಾಕಿ ಇಟ್ಟ ಹೆಸರನ್ನು ಸುಮಂಗಲೆಯರು ಐದು ಸಲ ಉಚ್ಚರಿಸುತ್ತಾರೆ.

### ದೈವಾದೀನ ಸಂದರ್ಭ

ಗ್ರಾಮದಲ್ಲಿ ಯಾರಾದರೂ ದೈವಾದೀನವಾದರೆ ಅವರ ಅಂತಿಮ ಸಂಸ್ಕಾರವಾಗುವವರೆಗೂ ಅಂದಿನ ಪೂಜೆ ಮಾಡುವದಿಲ್ಲ.ಎಡೆಯಿಲ್ಲ. ದೇವರನ್ನು ಹೊತ್ತವರು ಊರಲ್ಲಿ ಊಟ ಮಾಡದೆ ಊರ ಹೊರಗೆ ಹೊಲಕ್ಕೋ ಅಥವಾ ಕಣಕ್ಕೋ ಊಟವನ್ನು ತರಿಸಿಕೊಂಡು ಊಟಮಾಡುತ್ತಾರೆ. ಸಂಸ್ಕಾರ ಮಾಡಿದ ನಂತರ ಪೂಜೆ ಮಾಡುತ್ತಾರೆ. ಸಂಸ್ಕಾರಕ್ಕೆ ಹೋಗಿ ಬಂದವರು ಸ್ನಾನ ಮಾಡಿ ದೇವಸ್ಥಾನಕ್ಕೆ  ಬಂದು ಪ್ರದಕ್ಷಿಣೆ ಹಾಕಿ ನಮಸ್ಕರಿಸಿ ಮನೆಗೆ ಬರುತ್ತಾರೆ. ಸಂಸ್ಕಾರಕ್ಕೆ ಹೋಗಿ ಬರುವವರು ಅನ್ಯರನ್ನು ಮಾತನಾಡಿಸುವಂತಿಲ್ಲ ದೇವಸ್ಥಾನಕ್ಕೆ ಹೋಗಿಬಂದರೆ ಯಾವ ದೋಷವು ಇಲ್ಲವೆಂಬ ರೂಡಿಯಿದೆ. ಹೀಗೆ ಈಶ್ವರ ಆಂಜನೇಯ, ವೀರಭದ್ರ, ಚೌಡಮ್ಮ, ಕಾಳಮ್ಮ, ದೊಡ್ಡಬಸಜ್ಜ, ಉಜ್ಜಯಿನಿ ಮರುಳಸಿದ್ದ ದೇವರಗುಡಿಗಳಿಗೆ ನಮ್ಮ ದಿನನಿತ್ಯದಜೀವನ ಸಂಸ್ಕೃತಿಯೊಂದಿಗೆ ತಮ್ಮ ಸಂಬಂಧವನ್ನು ಗಟ್ಟಿಗೊಳಿಸುತ್ತಾ ಬಂದಿದ್ದಾರೆ.

### ೭.೨ ವಾರ್ಷಿಕಾವರ್ತನ ಆಚರಣೆಗಳು

ನಂಬಿಕೆ, ಆಚರಣೆ, ಸಂಪ್ರದಾಯದಂತೆ ವರ್ಷಕ್ಕೆ ಒಂದು ಬಾರಿಯಾದರೂ ಮನೆದೇವರ ಪೂಜೆ ಹಾಗೂ ಹಿರಿಯರ ಪೂಜೆ ಮಾಡಿ ತಮ್ಮ ಗುರುಗಳನ್ನು ಕರೆಯಿಸಿ ಗಣಂಗಳ ನೀಡುವುದು ವಾಡಿಕೆಯಲ್ಲಿದೆ. ಗಣಾಂಗಳು ನೀಡುವದು ಎಂದರೆ ಭಿನ್ನ ತೀರಿಸುವದು ಎಂದು ಹೇಳುತ್ತಾರೆ. ಬಿನ್ನ ತೀರಿಸುವುದು ಎಂದರೆ ವರ್ಷಕ್ಕೆ ಒಂದು ಬಾರಿ ಹಿರಿಯರ ಆರಾದನೆ ಹಬ್ಬ ಹುಣ್ಣಿಮೆಯ ಸಂದರ್ಭಗಳಲ್ಲಿ ಐದು ಜನ ಜಂಗಮರನ್ನು ಮನೆಗೆ ಕರೆಯಿಸಿ ಅವರಲ್ಲಿ ಒಬ್ಬರನ್ನು ಗದ್ದುಗೆಯ ಮೇಲೆ ಕೂಡ್ರಿಸಿ ಪಾದಗಳನ್ನು ತೊಳೆದು ಆ ತೀರ್ಥದಲ್ಲಿರುವ ನೀರನ್ನು ಮಾಡಿದ ಅಡುಗೆಗೆ ಸ್ವಲ್ಪ ಸಿಂಪಡಿಸಿ ಪ್ರಸಾದವಾದ ಬಳಿಕ ಸ್ವಾಮಿಗಳವರಿಂದ ಆಶೀರ್ವಾದ ಪಡೆದುಕೊಂಡು ದಕ್ಷಿಣೆ ಕೊಟ್ಟು ಸ್ವಮಿಗಳ ಪಾದಕ್ಕೆ ನಮಸ್ಕರಿಸಿದರೆ ನಮಗೆ ಬಂದ ಕಷ್ಟ ಹಾಗೂ ಪಾಪ ಪರಿಹಾರವಾಗುತ್ತದೆ. ಎಂಬ ನಂಬಿಕೆ ವೀರಶೈವ ಮತ್ತು ಕೆಲವು ಸಮುದಾಯಗಳಲ್ಲಿದೆ.  ಹಬ್ಬದಲ್ಲಿ ಸ್ವಾಮಿಗಳನ್ನು ಕರೆಯಿಸಿ ಪೂಜೆ ಸಲ್ಲಿಸುವುದು ಅಥವಾ ಅವರು ಇರುವ ಸ್ಥಳಕ್ಕೆ ಹೋಗಿ ಅವರ ದರ್ಶನ ಪಡೆದು ಬರುವುದು ರೂಡಿಯಾಗಿದೆ.

ಬಹುತೇಕ ವೀರಶೈವ ಮಠಗಳು ಒಂದಿಲ್ಲೊಂದುರೀತಿಯ ಕಾರ್ಯಕ್ರಮಗಳನ್ನು ಹಾಕಿಕೊಂಡು ಭಕ್ತರನ್ನು ಸಂಚಯಗೊಳಿಸಿ, ಸಾಮೂಹಿಕವಾದ ಜ್ಞಾನದೀಕ್ಷೆ , ಕ್ರಿಯಾದಿಕ್ಷೆಗಳನ್ನು, ನೀಡುತ್ತವೆ. ಇಂತಹ ಕ್ರಿಯಾದೀಕ್ಷೆಗಳನ್ನು ವೀರಶೈವರು ಸಂಸ್ಕಾರಗಳೆಂದು ಕರೆಯುತ್ತಾರೆ. ವ್ಯಕ್ತಿ ಸಂಸ್ಕಾರದಿಂದ ಸಂಸ್ಕೃತಿವಂತನಾಗುತ್ತಾನೆ. ನಾಗರಿಕನಾಗುತ್ತಾನೆ. ಅವನ ಜೀವನ ಯೋಜನಾಬದ್ಧವಾಗಿ, ಶಿಸ್ತುಬದ್ಧವಾಗಿ, ರೂಪಿತವಾಗಲು ಸಂಸ್ಕಾರಗಳೇ ಮುಖ್ಯವಾಗುತ್ತವೆ. ಈನಿಟ್ಟಿನಲ್ಲಿ ಮಠಗಳು ಸಂಸ್ಕಾರವನ್ನು ನೀಡುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ವ್ಯಕ್ತಿಗೆ ಧರ್ಮಬದ್ಧತೆಯನ್ನು, ದಾನಪದ್ಧತಿಯನ್ನು ಮಾನವೀಯ ಸ್ವಭಾವಗಳನ್ನು ಹುಟ್ಟುಹಾಕುವಲ್ಲಿ ಅವು ನಿರಂತರ ತೊಡಗಿರುತ್ತವೆ.ಇಂಥ ಕೆಲಸಗಳನ್ನು ನಿರ್ವಹಿಸದ ಮಠಗಳು ಅವು ಮಠಗಳೆಂಬ ಪದಕ್ಕೆ ಅಪವಾದವಾಗುತ್ತವೆ.

ವೀರಶೈವರಿಗೆ ಹಿಂದೂ ಧರ್ಮದಂತೆ ಯುಗಾದಿಯೇ ಆರಂಭದ ದಿನ ಯುಗಾದಿ ನಮ್ಮ ನಾಡಿಗೆ ಹೊಸತನವನ್ನು ತಂದು ಕೊಡುತ್ತದೆ. ನಿಸರ್ಗ ಅದಕ್ಕೆ ಸ್ಪಂದಿಸುತ್ತದೆ. ಯುಗಾದಿಯ ಕಂಪು ಅಖಂಡ ಕರ್ನಾಟಕ ಮಾತ್ರವಲ್ಲ. ಇಡೀ ಭಾರತವನ್ನು ಒಳಗೊಂಡಿರುತ್ತದೆ. ವಸಂತಾಗಮ ದೇಹ ಮನಸ್ಸುಗಳಿಗೆ ಹಿತವನ್ನು ತಂದುಕೊಡುತ್ತದೆ. ಮಠಗಳು ಅಂದು ಹೊಸ ವರ್ಷದ ಆರಂಭವನ್ನು ಆದರದಿಂದ ಸ್ವಾಗತಿಸುತ್ತೇವೆ ಮಠದಲ್ಲಿಯೂ ಇಂಥ ಕ್ರಿಯೆಯೊಂದಿಗೆ ವರ್ಷಾಗಮನದ ಸ್ವಾಗತವು ಸಂಭ್ರಮದಿಂದ ನೆರವಾಗುತ್ತದೆ. ಏಕೆಂದರೆ ಮಠದ ವತಿಯಿಂದ ತಯಾರಾದ ಪಂಚಾಂಗವನ್ನು ಮಠಾಧ್ಯಕ್ಷರು ಬಿಡುಗಡೆ ಮಾಡುತ್ತಾರೆ. ಅಂದು ಪುರ ಪ್ರಮುಖರು ಸುತ್ತಮುತ್ತಲ ಗ್ರಾಮಗಳ ಹಿರಿಯ ದೈವದವರು ಸಮುದಾಯದ ನೇತಾರರು ಮಠಕ್ಕೆ ಆಗಮಿಸಿ ಪಂಚಾಂಗ ಪಠಣದ ಕಾರ್ಯಕ್ರಮದಲ್ಲಿ ತೊಡಗುತ್ತಾರೆ. ಹೊಸ ಸಂವತ್ಸರದ ಭವಿಷ್ಯದ ಕುರಿತು ಚಿಂತನೆ ನಡೆಯುತ್ತದೆ.ರಾಶಿ ಫಲಗಳನ್ನು ಮಳೆ ಬೆಳೆಗಳ ವಿಚಾರವಾಗಿ ಚರ್ಚೆಗಳು ನಡೆಯುತ್ತವೆ.ಭವಿಷ್ಯದ ಸಮವತ್ಸರ ಸುಖಿಯಾಗಿರಲೆಂದು ಸಮೃದ್ಧವಾಗಿರಲೆಂದು ಆಶಯದಿಂದ ಸಭೆ ವಿಸರ್ಜನೆಗೊಳ್ಳುತ್ತದೆ.ಆ ಸಂದರ್ಭದಲ್ಲಿ ಪಂಚಾಂಗ ದಾನ ಕಾರ್ಯಕ್ರಮ ನೆರವೇರುತ್ತದೆ. ಯುಗಾದಿಪಾಡ್ಯದ ಮರುದಿನ ಶ್ರೀಮಠದಲ್ಲಿ ಹೊಸ ಸಂವತ್ಸರದ ವಿಶೇಷ ಪೂಜೆಗಳು ನೆರವೇರುತ್ತವೆ. ಸಾಯಂಕಾಲದ ಹೊತ್ತು ಪುರದ ಪ್ರಮುಖರು ಹೊಸ ಸಂವತ್ಸರದ ಚಂದ್ರನನ್ನು ಕಂಡು ಸಂಭ್ರಮದಿಂದ ಸಂತೂಷಪಡುತ್ತಾರೆ. ಪರಸಪರ ಅಭಿನಂದನೆಗಳ ಕೊಡುಕೊಳ್ಳುವಿಕೆ ನಡೆಯುತ್ತದೆ. ಬಿದಿಗೆ ಚಂದ್ರಮನ ದರ್ಶನವಾಗುತ್ತಿದ್ದಂತೆ ಪುರ ಪ್ರಮುಖರು ಧರ್ಮಾಸಕ್ತರು, ಸುತ್ತಮುತ್ತಲ ಗ್ರಾಮದ ಸದ್ಭಕ್ತರು ಶ್ರೀಗಳಿಗೆ ಪ್ರಣಾಮಗಳನ್ನು ಸಲ್ಲಿಸಿ, ಹೊಸ ಸಂವತ್ಸರದ ಆಗಮನದ ಸಂದರ್ಭದಲ್ಲಿ ಶುಭಾಶೀರ್ವಾದಗಳನ್ನು ಪಡೆಯುತ್ತಾರೆ. ಅಂದಿನಿಂದ ಆರಂಭವಾದ ಮಠದ ಪಂಚಾಂಗ ವರ್ಷದ ಹನ್ನೆರಡು ಅಮವಾಸೆಗಳನ್ನು ಹುಣ್ಣಿಮೆಗಳ ವಿಶೇಷ ಪೂಜೆ ಕಾಣಿಕೆಗಳ ಅರ್ಪಣೆ ಮುಂತಾದ ಧರ್ಮ ಸಂಪನ್ನ ಕಾರ್ಯಕ್ರಮಗಳ ಮೂಲಕ ಪರ್ಯಾವಸನಗೊಳ್ಳುತ್ತದೆ.

ಅಕ್ಷಯ ತದಗಿಯಂದು ಮಠದಲ್ಲಿ ಬಸವಜಯಂತಿ ಉತ್ಸವ, ಅದ್ದೂರಿಯಾಗಿ ಆಚರಿಸಲ್ಪಡುತ್ತದೆ. ಬಸವೇಶ್ವರರ ರಥೋತ್ಸವವು ಜರುಗುತ್ತದೆ. ಹನ್ನೆರಡನೆಯ ಶತಮಾನದ ಈ ಪ್ರಮಥ ಗಣ

ಜನಮಾನಸದಲ್ಲಿ ನಿರಂತರವಾಗಿ ಬಂದಿರುವುದರ ಪ್ರತೀಕ ಇದಾಗಿದೆ. ಶ್ರೀಬಸವೇಶ್ವರರ ಸಮಾಜೋ ಬೌದ್ಧಿಕಚಳುವಳಿ, ವೀರಶೈವ ಧರ್ಮ ಮತ್ತೇ ಉದ್ಧೀಪನಗೊಳ್ಳಲಿಕ್ಕೆ ಕಾರಣವಾಯಿತು. ಬಸವ ಜಯಂತಿಯು ಕೇವಲ ಬಸವೇಶ್ವರರ ಜನನ ನಿಮಿತ್ತ ಮಾತ್ರವಾಗಿ ಆಚರಣೆಯಾಗುವುದಿಲ್ಲ. ಅದು ಇಡೀ ವಚನ ಚಳುವಳಿಯ ಇಡೀ ವಚನಕಾರರ ಸಂಸ್ಮರಣೀಯ ದಿನದ ಆಚರಣೆಯ ಅಂಗವಾಗಿ ಜರುಗುತ್ತದೆ.ಕಲ್ಯಾಣದ ಚಳುವಳಿಯನ್ನು ಬಿಟ್ಟರೆ ಪ್ರಪಂಚದಲ್ಲಿ ಅದಕ್ಕೆ ಸಮನಾದಂತಹ ಚಳುವಳಿಯೆಂದರೆ ಫ್ರಾನ್ಸ್ ಕ್ರಾಂತಿ, ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವಕ್ಕಾಗಿ ನಡೆದ ಈ ಹೋರಾಟ ಒಂಬತ್ತು ಶತಮಾನಗಳ ಹಿಂದೆಯೆ ಕನ್ನಡದ ನೆಲದಲ್ಲಿ ಜರುಗಿದ್ದು ಮಾನವ ಇತಿಹಾಸ ಮರೆಯಲಾರದಂಥ ಘಟನೆ ಇಂತಹ ವೈಚಾರಿಕ ವಿದಾಯ ಕಾರ್ಯಕ್ರಮಗಳು ಮಠದಲ್ಲಿ ಅತ್ಯಂತ ಸಂಭ್ರಮದಿಮದ ಜರುಗುತ್ತವೆ. ಎಲ್ಲಾ ಸಮುದಾಯದವರನ್ನು ಒಳಗೊಳ್ಳುವ ಈ ರಥೋತ್ಸವವು ಜಾತ್ಯಾತೀತವಾದದ್ದು ಅಂದೇ ಜರುಗುವ ದಾರುಕ ಜಯಂತಿ ಸದ್ಧರ್ಮ ಸಿಂಹಾಸನದ ಆದಿಪುರುಷ ದಾರುಕಾಚಾರ್ಯರ ಸ್ಮರಣಾರ್ಥ ರುದ್ರಾಭಿಷೇಕ, ವಿಶೇಷಪೂಜಾ ಕಾರ್ಯಕ್ರಮಗಳು ಆ ನಿಮಿತ್ತ ನಡೆಯುತ್ತವೆ. ಪ್ರಸಾದ ಸಂತರ್ಪಣೆಯು ಇರುತ್ತದೆ.

ನೂಲಹುಣ್ಣಿಮೆಯ ದಿನವು ವೀರಶೈವರಿಗೆ ಪವಿತ್ರವಾದದ್ದು, ಅಂದು ಶ್ರೀಗಳವರ ಕೃಪಾ ಶೀರ್ವಾದದಿಂದ ಕರಡಿಗೆಗೆ ಪೋಣಿಸಿದ ಶಿವದಾರವನ್ನು ವೀರಶೈವರು ಬದಲಾಯಿಸುತ್ತಾರೆ. ಅಂದು ವಿಶೇಷವಾಗಿ ಭಕ್ತರು ನೆರೆದು ಇಂತಹ ಪವಿತ್ರ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಇವೆಲ್ಲ ಆದ ಮೇಲೆ ಸಾಮೂಹಿಕ ಪೂಜಾ ಕಾರ್ಯಕ್ರಮಗಳು ನೆರವೇರುತ್ತವೆ.

ಭಾದ್ರಪದ ಶುಕ್ಲಪಕ್ಷದ ಚತುರ್ಥಿಯ ದಿನ ಗಣೇಶ ವಿಗ್ರಹವನ್ನು ಮಠದಲ್ಲಿ ಶಸ್ತ್ರೋಕ್ತವಾಗಿ ಪ್ರತಿಷ್ಠಾಪಿಸುತ್ತಾರೆ. ಇದು ಸ್ವಾತಂತ್ರ್ಯಾ ಚಳುವಳಿಯ ನಂತರ ಬೆಳವಣಿಗೆಯಾಗಿದೆ. ರಾಷ್ಟ್ರೀಯತೆಗೆ ಒತ್ತು ಕೊಡುವ ಈ ಹಬ್ಬ ಮಠದಲ್ಲಿ ವಿಜ್ರಂಭಣೆಯಿಂದ ಜರುಗುತ್ತದೆ. ಎಲ್ಲ ಮತದವರು ಎಲ್ಲ ಜಾತಿಯವರು, ಪ್ರಾಂಜ್ವಲ ಮನಸ್ಸಿನಿಂದ ಪಾಲ್ಗೊಂಡು ಪೂಜಾ ಕಂಕೈರ್ಯಗಳನ್ನು ಸಲ್ಲಿಸುತ್ತಾರೆ. ಎಂಟು ಒಂಬತ್ತು ದಿನಗಳ ತರುವಾಯ ಗಣಪತಿ ವಿಗ್ರಹವನ್ನು ನೀರಿನಲ್ಲಿ ವಿಸರ್ಜಿಸುತ್ತಾರೆ ಅದರ ಬೆನ್ನಲ್ಲೇ ಬರುವ ಜೋಕುಮಾರಸ್ವಾಮಿ ಹಬ್ಬವು ಅಲ್ಲಿನ ವಿಶೇಷವೆಂದೇ ಹೇಳಬಹುದು. ಜೋಕುಮಾರಸ್ವಾಮಿ ಆ ಬರದ ನಾಡಿಗೆ ಮಳೆ ತರಿಸುತ್ತಾನೆಂಬ ನಂಬಿಕೆ ಆ ಭಾಗದ ಜನರಲ್ಲಿದೆ. ಉಪ್ಪಾರ ಸಮುದಯದ ಜನರು ಜೋಕುಮಾರಸ್ವಾಮಿಯ ವಿಗ್ರಹವನ್ನು ಮಠಕ್ಕೆ ತಂದು ವಿಶೇಷ ಪೂಜೆ ಸಲ್ಲಿಸಿ, ಮನೆ ಮನೆಗೆ ಬುಟ್ಟಿಯಲ್ಲಿ .ಅವನನ್ನು ಹೊತ್ತು ಮಳೆಗಾಗಿ ಪ್ರಾರ್ಥಿಸುತ್ತಾರೆ. ಜೋಕುಮಾರಸ್ವಾಮಿಯ ವಿಸರ್ಜನೆಯ ನಂತರ ಧೋ ಎಂದು ಮಳೆ ಸುರಿಯುತ್ತದೆ. ಎಂಬುದಕ್ಕೆ ಇನ್ನೂ ಜೀವಂತವಾಗಿವೆ. ಹಾಗಾಗಿ ಇಂತಹ ಆಚರಣೆಗಾಗಿ ಸದ್ಭಕ್ತರು ಮಠಕ್ಕೆ ಆಗಮಿಸಿ ಜೋಕುಮಾರ ಸ್ವಾಮಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ.

ಮಹಾನವಮಿ ನಮ್ಮ ನಾಡಹಬ್ಬ ಅವ್ಯಾಹತವಾಗಿ ಹತ್ತು ದಿನಗಳ ಪರ್ಯಂತ ಜನರು ಈ ಸಂಭ್ರಮದ ಹಬ್ಬದ ನಾಡಿನಲ್ಲಿ ಸುಗ್ಗಿಯ ಹಬ್ಬವೆಂದೇ ಪರಿಗಣಿತವಾಗುತ್ತದೆ. ಆರನೇಯ ದಿನ ಆಯುಧ ಪೂಜೆ ನೆರವೇರುತ್ತದೆ. ಕ್ಷೇತ್ರನಾಥ ವೀರಭದ್ರ ಮತ್ತು ಕಾಳಮ್ಮನ ವಿಗ್ರಹಕ್ಕೆ ವಿಶೇಷ ಪೂಜೆ ಸಲ್ಲಿಸಲಾಗುತ್ತದೆ. ಅಂದು ಚಂಡಿಗೆ ಕುಂಬಳಕಾಯಿ ಬಲಿಕೊಡುವ ಕಾರ್ಯವು ನೆರವೇರುತ್ತದೆ. ಪೂರ್ವಿಕರ ಗದ್ದಗೆಗಳಿಗೆ ಅಂದು ಶಾಸ್ತ್ರೋಕ್ತ ಪೂಜೆ ಸಲ್ಲಿಸಲಾಗುತ್ತದೆ. ಒಂಭತ್ತನೇ ದಿನಗಳು ರಾತ್ರಿಪುರಾಣವು ಪಠಣಗೊಳ್ಳುತ್ತದೆ. ಅದರ ವ್ಯಾಖ್ಯಾನ ನೇರವೇರುತ್ತದೆ. ಇಂತಹ ಧಾರ್ಮಿಕ ಕಾರ್ಯದಲ್ಲಿ ಸದ್ಭಕ್ತರು ಸಂಭ್ರಮದಿಂದ ಪಾಲ್ಗೊಳ್ಳುತ್ತಾರೆ.

ದೀಪಾವಳಿ ಮತ್ತು ಬಲಿಪಾಡ್ಯೆಮಿಯ ಆಚರಣೆ ಮಠದಲ್ಲಿ ಸಾಂಕೇತಿಕವಾಗಿ ಜರುಗುತ್ತದೆ. ಅಂದು ಆರಂಭವಾದ ದೀಪೋತ್ಸವ ಕಾರ್ತೀಕ ಮಾಸದ ಪರ್ಯಂತ ಶಾಸ್ತ್ರೋಕ್ತವಾಗಿ ಆಚರಣೆಯಾಗುತ್ತದೆ. ಪ್ರತಿಸೋಮವರ ಕಾರ್ತಿಕೋತ್ಸವ ಮಠದಲ್ಲಿ ಅಲಂಕೃತ ದೀಪಗಳನ್ನು ಹಚ್ಚುವುದರ ಮೂಲಕ ಬೆಳಕಿನ ಹಬ್ಬವನ್ನು ಆಚರಿಸಲಾಗುತ್ತದೆ.

ಊರಲ್ಲಿ ಬಸವಣ್ಣ, ವೀರಣ್ಣ, ಕೊಟ್ರಯ್ಯ, ಗೋಣಿಬಸಪ್ಪ, ಮೈಲಾರಲಿಂಗ ಯಾವುದೇ ರಥ ವಿಜ್ರಂಭಣೆಯಿಂದ ಸಾಂಗೋಪಾಂಗವಾಗಿ ನಡೆಯುವ ಮುನ್ನ ಸ್ವಾಮಿಗಳನ್ನು ಆಹ್ವಾನಿಸಿ, ರಥವೇರಿಸಿ ಅಲ್ಲಿ ದೇವರ ಮೂರ್ತಿ ಕೂಡಿಸಿ ರಥ ಜರುಗಿಸುವ ಸಂಪ್ರದಾಯವಿದೆ. [೨]

## ಉತ್ಸವಗಳು

ಈ ಸ್ಥಳದ ವೀರಭದ್ರೇಶ್ವರ ರಥೋತ್ಸವ ಗೌರಿಹುಣ್ಣಿಮೆಯಂದು ಜರುಗುತ್ತದೆ. ವೀರಭದ್ರ ಶ್ರೀ ಮಠದ ಕ್ಷೇತ್ರನಾಥನೆಂದೇ ಪರಿಗಣಿಸಬೇಕಾಗುತ್ತದೆ. ಮೂರು ದಿನಗಳ ನಂತರ ಅಗ್ನಿ ಹರಕೆ ಹೊತ್ತವರು ತಗ್ಗಾದ ಪ್ರದೇಶದಲ್ಲಿ ದೊಡ್ಡ ದೊಡ್ಡ ಕೆಚ್ಚಿನ ಕಟ್ಟಿಗೆಯಿಂದ ಸುಟ್ಟ ಬೆಂಕಿ, ತೀರಾ ದೊಡ್ಡದು ಅಲ್ಲದ ಹಾಗೂ ಚಿಕ್ಕದು ಅಲ್ಲದ ಸುತ್ತಲು ಹತ್ತು ಅಡಿ ತಗ್ಗಾದ ಜಾಗದಲ್ಲಿ ಅಗ್ನಿ ಕುಂಡ ಇರುತ್ತದೆ. ಹರಕೆ ಹೊತ್ತವರು ಆ ಅಗ್ನಿಕುಂಡದಿಂದ ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈಕಡೆಗೆ ಹಾರಿ ಹೋಗುವ ಸಂಪ್ರದಾಯ ವಿದೆ. ಆಗ ಅವರ ಕಷ್ಟಗಳು ಪರಿಹಾರವಾಗುತ್ತವೆ ಎಂಬ ನಂಬಿಕೆ ಇದೆ. ನಡೆಯುವ ರಥೋತ್ಸವ ಮತ್ತು ಜಾತ್ರಾ ಮಹೋತ್ಸವಗಳು ವರ್ಣಮಯ ಧಾರ್ಮಿಕ ಕಾರ್ಯಕ್ರಮಗಳೊಂದಿಗೆ ಪರ್ಯವಸಗೊಳ್ಳುತ್ತವೆ. ವೈಶಾಖಮಾಸದ ಸಪ್ತಮಿ ಬಹುಳದಿಂದ ಪೂಜ್ಯ ಶ್ರೀಚಂದ್ರಶೇಖರ ಶಿವಾಚಾರ್ಯರ ಪುಣ್ಯ ತಿಥಿಜರುಗುತ್ತದೆ. ಈ ಸಂದರ್ಭದಲ್ಲಿ ಸಾಮೂಹಿಕ ಮದುವೆಗಳನ್ನು ಮಠದ ವತಿಯಿಂದ ಸಂಘಟಿಸಲಾಗುತ್ತದೆ. ನೂತನ ದಂಪತಿಗಳಿಗೆ ವಸ್ತ್ರ ಆಭರಣಾದಿಗಳನ್ನು ನೀಡಿ ಮಂಗಳಾಶಿರ್ವಾದದಿಂದ ಅವರ ಜೀವನ ಸುಖಮಯವಾಗಿರಲೆಂದು ಹಾರೈಸಲಾಗುತ್ತದೆ. ಪ್ರಸಾದವಿತರಣೆಯಾದ ನಂತರ ವಿವಾಹ ಸಂದರ್ಭಕ್ಕೆ ಹಾಜರಾದ ಸದ್ಭಕ್ತರು ಅಲ್ಲಿಂದ ವಿಸರ್ಜನೆಗೊಳ್ಳುತ್ತಾರೆ. ಇವು ಪ್ರತಿ ವರ್ಷದ ತೆಗ್ಗಿನಮಠದಲ್ಲಿ ಜರುಗುವ ಕ್ರಿಯಾಚಾರಗಳು.

ಪ್ರತಿ ವರ್ಷ ಶಿವರಾತ್ರಿ ದಿನದಂದು ಪಂಚಾಮೃತದಿಂದ ಎಲ್ಲಾ ದೇವರುಗಳಗೂ ಅಭಿಷೇಕ ಮಾಡುವುದರ ಜೊತೆಗೆ ಪ್ರತಿ ವರ್ಷವೂ ರಕ್ತರಾತ್ರಿ ಕುರುಕ್ಷೇತ್ರ ಹೇಮರೆಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ ಇನ್ನೂ ಮುಂತಾದ ಪೌರಾಣಿಕ ಗವಾಯಿಗಳು ಪ್ರತಿಭಾನ್ವಿತ ಕಲಾವಿದರನ್ನು ಕರೆಯಿಸಿ ನಾಟಕ ಬಿತ್ತರಗೊಳ್ಳುವಂತೆ ವ್ಯವಸ್ಥೆ ಮಾಡುತ್ತಾರೆ.

## ೭.೩ ಪ್ರವಚನಗಳು

"ಪ್ರತಿವರ್ಷ ಶ್ರಾವಣ ಮಾಸದಲ್ಲಿ ಮಠದಲ್ಲಿ ಪುರಾಣ, ಪ್ರವಚನ, ಶ್ರೀಗಳವರ ಪುಣ್ಯಸಾನಿಧ್ಯದಲ್ಲಿ ತಪ್ಪದೇ ಜರುಗುತ್ತವೆ. ಶ್ರಾವಣಮಾಸ ವೀರಶೈವರಿಗೆ ಹಾಗೂ ಎಲ್ಲಾ ಜನರಿಗೂ ಅತ್ಯಂತ ಪವಿತ್ರವಾದದ್ದು, ವೀರಶೈವ ಸಂಪನ್ನರಾದವರು ಈ ಮಾಸವನ್ನು ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಆಚರಿಸುತ್ತಾರೆ. ರುದ್ರಾಭಿಷೇಕ ರುದ್ರೊಠಣ, ಸೋಮಲಿಂಗಾಮೃತ, ಗೌರಿವ್ರತ ಗಣಪತಿವ್ರತಗಳನ್ನು ಆಚರಿಸಲು ಇದು ಸೂಕ್ತ ಶ್ರಾವಣಮಾಸವೆಂದು ವೀರಶೈವರಿಂದ ಪರಿಗಣಿತವಾಗಿದೆ. ಈ ಸಂದರ್ಭದಲ್ಲಿ ಬಹುತೇಕ ಎಲ್ಲಾ ಮಠಮಾನ್ಯಗಳಲ್ಲೂ ಪುರಾಣ, ಪ್ರವಚನಗಳು ನಡೆಯುತ್ತವೆ. ಗಿರಿಜಾ ಕಲ್ಯಾಣ, ಶರಣಬಸವೇಶ್ವರ ಪುರಾಣ, ಕುಮಾರಸಂಭವದಂತಪುರಾಣ, ಬಸವೇಶ್ವರಪುರಾಣ, ಕೊಟ್ಟೂರುಬಸವೇಶ್ವರಪುರಾಣ, ಪ್ರವಚನ ಮತ್ತು ಪಠಣ ನಡೆಯುತ್ತವೆ. ಶ್ರೀರೇವಣಶಿದ್ಧೇಶ್ವರಪುರಾಣ ಪ್ರವಚನ ಶ್ರೀಸನ್ನಿದಾನದಲ್ಲಿ ತಪ್ಪದೇ ಜರುಗುತ್ತಿದ್ದವು. ತೆಗ್ಗಿನಮಠದ ರೇವಪ್ಪಯ್ಯ ಶಾಸ್ತ್ರಿಗಳಿಂದ ಪುರಾಣ ಪ್ರವಚನ ಹಾಗೂ ಹಿರೇಹಡಗಲಿ ಪುರಾಣಿಕ ಮಠದ ಪಂಡಿತ ಶ್ರೀವಿರೂಪಾಕ್ಷಶಾಸ್ತ್ರಿಗಳು ಇನ್ನೂ ಅನೇಕ ಪಂಡಿತರಿಂದ ಶಿವಕೀರ್ತನೆಗಳು ನಡೆಯುತ್ತಿದ್ದವು. ಆರ್ಯ, ವೈಶ್ಯ, ಜೈನರು, ಗೌಳಿಗರು ಮುಂತಾದ ಸಕಲ ಮತದವರು ಮಠಕ್ಕೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ನಾಡಿನ ಮೂಲೆ ಮೂಲೆಗಳಿಂದ ಭಜನಾಸಂಘದವರು ಆಗಮಿಸಿ ಸದಾಶಿವನನ್ನು ಭಜಿಸಿ, ಅವರನ್ನು ಒಲೈಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಶ್ರೀತೆಗ್ಗಿನಮಠವು ಈ ಎಲ್ಲಾ ಕಾರ್ಯಗಳಿಗೆ ವೇದಿಕೆಯನ್ನಾಗಿಸಿಕೊಡುತ್ತದೆ. ಕಾರ್ಯಕ್ರಮಗಳನ್ನು ಸಂಘಟಿಸಿ, ಅಚ್ಚುಕಟ್ಟಾಗಿ ನಡೆಸಿಕೊಡುತ್ತದೆ. ಈ ಪ್ರದೇಶದ ಜನಗಳೆಲ್ಲರಿಗೂ ಪುರಾಣ ಪ್ರವಚನದ ಮೂಲಕ ಧರ್ಮ ಜಾಗ್ರತೆಯನ್ನು ಉಂಟು ಮಾಡುತ್ತಿದ್ದರು. ಶ್ರಾವಣ ಮಾಸದ ಕೊನೆಯದಿನ ಹರಿಹರ ರಸ್ತೆಯಲ್ಲಿರುವ ಗೇಟಿನ ಬಸವಣ್ಣನಗುಡಿಗೆ ಭಕ್ತರೊಡಗೂಡಿ ಹೋಗಿ ಅಲ್ಲಿ ವಿಶೇಷ ಪೂಜೆಯನ್ನು ಶ್ರೀಗಳವರು ಮಾಡುತ್ತಿದ್ದರು. ಬಂದ ಭಕ್ತರೆಲ್ಲರಿಗೂ ಅನ್ನ ಸಂತರ್ಪಣೆ ನಡೆಯುತ್ತಿತ್ತು.

## ೭.೪ ಹರಕೆಗಳು

ಸಂಪ್ರದಾಯಬದ್ಧವಾಗಿ ಸುಖ ನೆಮ್ಮದಿಯಿಂದ ಜೀವನ ಸಾಗಿಸುವ ಸಂದರ್ಭದಲ್ಲಿ ಮಳೆಬಾರದೇ ಬೆಳೆ ಕಮರಿ ಹೋಗಿ ಮಣ್ಣಲ್ಲಿ ಮಣ್ಣಾಗಿ ಸೇರಿಹೋದಾಗ ನಮ್ಮ ಕೃಷಿಕರ ಬದುಕು ಶೋಚನೀಯ ಸ್ಥಿತಿ ತಲುಪುತ್ತದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎನ್ನುವಂತೆ "ಉತ್ತರೇ ಮಳೆಯಾಗದೇ ಹೋದರೇ ಹೆತ್ತವ್ವ ಮುನಿಸಿಕೊಂಡಂತೆ ಕೃಷಿಕನಿಗೆ ಉತ್ತರ ಮಳೆ ಬಂದೇ ಬರುತ್ತದೆ ಎಂಬ ಆಸೆ

ಇದ್ದೇ ಇರುತ್ತದೆ. "ಉತ್ತರೆ ಮಳೆಯಲ್ಲಿ ಹುಟ್ಟಿದ್ದೆಲ್ಲಾ ಹೊಡೆ ಎನ್ನುವ ಹಾಗೆ ಉತ್ತರೆ ಮಳೆಯು ಬಾರದೇ ಇರುವ ಸಂದರ್ಭದಲ್ಲಿ ಜಾನಪದ ಸ್ತ್ರೀ ಶಿವಾಚಾರ್ಯರ ಅಡ್ಡಪಲ್ಲಕ್ಕಿ ಉತ್ಸವ ನಡೆಸಿದರೆ ಮಳೆ ಬರುತ್ತದೆ ಎನ್ನುವ ನಂಬಿಕೆ ಇನ್ನೊಂದು ಕಡೆ ಇದೆ. ಆದರೂ ಸ್ವಾಮೀಜಿ ಕುರಿತು ಜಾನಪದ ತ್ರಿಪದಿಯಲ್ಲಿ ಹೀಗೆ ವ್ಯಕ್ತಪಡಿಸುತ್ತಾಳೆ

"ಬಿತ್ತಿದ ಪೈರು ಒಣಗಿ ಹೋಗುತಿವೆ
ಹೆತ್ತವ್ವ ಹಿಟ್ಟು ಕೊಡಲೊಲ್ಲಳು! ಶಿವರಾಯ
ಉತ್ತರೆಯ ಮಳೆಯನ್ನು ಕರುಣಿಸು"

ಎಂದು ಹೀಗೆ ವ್ಯಕ್ತಪಡಿಸಿ ಮಠದ ಸ್ವಾಮಿಗಳಲ್ಲಿ ಪ್ರಾರ್ಥಿಸಿಕೊಂಡಿದ್ದಾಳೆ ಕೆಲವೊಂದು ಸಾರಿ ಪೂಜ್ಯರ ಪಲ್ಲಕ್ಕಿ ಉತ್ಸವ ನಡೆಯುವ ಹಾಗೂ ನಡೆದ ರಾತ್ರಿಯೇ ಪೂಜ್ಯರ ಸತ್ಯ ನಿಷ್ಠರಾಗಿದ್ದರೆ ಮಳೆ ಬಂದು ಜನರನ್ನು ಅಹಲ್ಲಾದಗೊಳಿಸುತ್ತದೆ. ಹಾಗೂ ಮಳೆ ಬೇಗ ಬಾರದೇ ಇರುವ ಮಕ್ಕಳಾಗದೇ ಇರುವ ಸಂದರ್ಭದಲ್ಲಿ ದೇವರುಗಳ ಹೆಸರಿನಲ್ಲಿ ಮುಡುಪನ್ನು ಕಟ್ಟುವುದು ಹಾಲುತುಪ್ಪ ಮೀಸಲಿಡುವುದು, ಕಂಡುಬರುತ್ತದೆ. ಹಾಗೆ ಮಡಿ ಉಡಿಯಿಂದ ನಾವು ಈ ಕಾರ್ಯ ಮಾಡಿದರೆ ದೇವರು ನಮಗೆ ಬೇಕಾಗಿರುವುದನ್ನು ದಯಪಾಲಿಸುತ್ತಾನೆ. ಎಂಬ ನಂಬಿಕೆ ಇದೆ. ಮಕ್ಕಳಿಲ್ಲದವರು ಮಕ್ಕಳನ್ನು ಕರುಣಿಸುವಂತೆ ಬೇಡಿ ಪೂಜ್ಯರ ಆಶೀರ್ವಾದ ಪಡೆದು ಮಕ್ಕಳ ಸಂತಾನ ಪಡೆದ ಮೇಲೆ ಪೂಜ್ಯನಾಮವನ್ನೇ ತಮ್ಮ ಶಿಶುವಿಗೆ ನಾಮಕರಣ ಮಾಡುವುದು ಆಗ ರೋಗ ರುಜಿನಿ ಬಂದಾಗ ನನ್ನ ಮಗನನ್ನು ಉಳಿಸಿಕೊಡು ಎಂದು ನಿನ್ನ ಜೋಡು ಗುಗ್ಗಳ ಹೊರಡಿಸುತ್ತೇನೆ ಎಂದು ಹೀಗೆ ಜನಪದ ಹಾಡಿನಲ್ಲಿ ವ್ಯಕ್ತಪಡಿಸಿದ್ದಾಳೆ.

ಚಾರಿಬೈಲಾಗಿರುವ ವೀರಭದ್ರ ನಿನಗೆ
ಜೋಡು ಗುಗ್ಗಳ ಹೋರುವೆನು
ಜೋಡು ಗುಗ್ಗಳ ಏನೆಂದು ಹೊರುವೆನು ಶಿವನೆ
ಬಾಲಪುಟ್ಟರಸ ಉಳಿದರೆ

ಅವನ್ನು ನಮ್ಮಿಂದ ಮುಕ್ತಿ ಹೊಂದುವಂತೆ ಮಾಡು ಸ್ವಾಮಿ ಎಂದು ಶಿವಾಚಾರ್ಯರನ್ನು ಆಶೀರ್ವದಿಸುವಂತೆ ಭಕ್ತರು ಹರಕೆ ಹೊರುತ್ತಾರೆ.[೧]

ತೆಗ್ಗಿನಮಠದ ಸದ್ಭಕ್ತರು ಕೇವಲ ಹರಪನಹಳ್ಳಿಯಲ್ಲಿ ನೆಲೆಗೊಂಡಿಲ್ಲ. ನಾಡಿನ ಉದ್ದಗಲಕ್ಕೂ ನೆಲೆಗೊಂಡಿದ್ದಾರೆ. ವಿಶೇಷವಾಗಿ ಹಡಗಲಿ, ಹಗರಿಬೊಮ್ಮನಹಳ್ಳಿ ಭವಾನಿಪೇಟೆ, ಹೊಸಪೇಟೆ, ಮರಿಯಮ್ಮನಹಳ್ಳಿ ಹನುಮನಹಳ್ಳಿ ಮುಂತಾದ ಊರುಗಳಿಂದ ಮಠದ ಪ್ರತಿಯೊಂದು ಕಾರ್ಯಕ್ರಮಕ್ಕೂ ಕಡ್ಡಾಯವಾಗಿ ಆಗಮಿಸುತ್ತಾರೆ. ದೂರದ ಊರುಗಳಿಂದ ಮುಡುಪು, ಹರಕೆಗಳನ್ನು ಹೀಗೆ ತ್ರಿಪದಿಗಳ ಮೂಲಕ ವ್ಯಕ್ತಪಡಿಸಿದ್ದಾಳೆ

ಮಕ್ಕಳ ಕೊಡು ಶಿವನೆ ಮತ್ತೊಂದು ನಾಬಲ್ಲೆ
ಹತ್ತು ಮಂದ್ಯಾಗ ಮನೆಗೆಲಸ ಕಂದಾನಂತ
ಮುತ್ತೈದ ತನವ ಕೊಡು ಶಿವನೆ

ಸಲ್ಲಿಸುವವರ ಸಂಖ್ಯೆಯೂ ಅಗಣಿತವಾಗಿದೆ. ತಮ್ಮ ಇಷ್ಟಾರ್ಥ ಸಿದ್ಧಿಗೆ ಮನದ ಕ್ಲೇಶಗಳನ್ನು ಕಳೆದುಕೊಳ್ಳುವ ಸಲುವಾಗಿ ಶಾಂತಿಯನ್ನು ಅರಸಿ, ಮಠಕ್ಕೆ ದಿನವೂ ಸಾವಿರಾರು ಭಕ್ತರು ಬಂದು ಹೋಗುತ್ತಾರೆ. ಪ್ರತಿದಿನವು ಗುರುಗಳ ಇಷ್ಟಲಿಂಗ ಪೂಜೆಯಾದ ತಕ್ಷಣ ಮಠದಲ್ಲಿ ದಾಸೋಹ ವ್ಯವಸ್ಥೆ ಇರುತ್ತದೆ. ಆ ಸಂದರ್ಭದಲ್ಲಿ ಮಠದಲ್ಲಿರುವ ಹರ–ಗುರು–ಚರ–ಮೂರ್ತಿಗಳ ವೇದಾಧ್ಯಯನ, ಸಂಸ್ಕೃತಾಧ್ಯಯನ, ವೈದಿಕ ಮತ್ತು ಜ್ಯೋತಿಷ್ಯವನ್ನು ಕಲಿಯುತ್ತಾ ತಮ್ಮ ಪ್ರಾಯೋಗಿಕ ಉಪಕ್ರಮಗಳನ್ನು ಪಡೆದುಕೊಳ್ಳುತ್ತಾರೆ ವೀರಭದ್ರನಿಗೆ ಮತ್ತು ಕಾಳಿಗೆ ಇಲ್ಲಿ ವಿಶೇಷ ಪೂಜೆ ಪ್ರತಿದಿನವೂ ಸಲ್ಲುತ್ತದೆ.

ತೆಗ್ಗಿನಮಠದ ಒಂದು ರೋಚಕ ಸಂಗತಿ ಹೇಳಬೇಕಾಗಿದೆ. ಅಲ್ಲಿ ಭೂತಪ್ಪನ ಆರಾಧನೆಯು ನಡೆಯುತ್ತದೆ.ಹರಪನಹಳ್ಳಿ ತಾಲೂಕಿನ ರಾಮಘಟ್ಟ ಗ್ರಾಮದಲ್ಲಿ ಭೂತಚೇಷ್ಠೆ ಸುಮಾರು ದಿನಗಳಿಂದ ೪–೫ ದಶಕಗಳ ಹಿಂದೆ ವಿಪರೀತವಾಗಿತ್ತು.ಸುತ್ತಮುತ್ತಲ ಗ್ರಾಮದ ಜನರು ಈ ಭೂತಚೇಷ್ಠೆಯಿಂದ ಕಂಗಾಲಾಗಿದ್ದರಂತೆ, ಹಗಲು ಇರುಳೆನ್ನದೇ ಭೂತದ ಚೇಷ್ಠೇ ನಿರತವಾಗಿ ನಡೆಯುತ್ತಿತ್ತಂತೆ ಆ ಸಂದರ್ಭದಲ್ಲಿ ಭಯಬೀತರಾದ ಸುತ್ತಮುತ್ತಲ ಗ್ರಾಮಸ್ಥರು ಭೂತ ಶಾಂತಿಗೆ ಏನೆಲ್ಲವನ್ನು ಮಾಡಿದರು ಮಲೆಯಾಳ ನಾಡಿನಿಂದ ಮಾಂತ್ರಿಕರನ್ನು ಕರೆತಂದು ಭೂತಕ್ಕೆ ಶಾಂತಿ ಮಾಡಿಸಲಾಯಿತಂತೆ ಆದರೂ ಅದರ ಚೇಷ್ಠೇ ನಿಲ್ಲಲಿಲ್ಲ. ಉತ್ತರಭಾರತದ ಅನೇಕ ಮಂತ್ರವಾದಿಗಳು ಭೂತವನ್ನು ಕಟ್ಟಿಹಾಕಲು ಪ್ರಯತ್ನಪಟ್ಟರಂತೆ ಅಲ್ಲಿಗೂ ಭೂತಚೇಷ್ಠೆ ನಿಲ್ಲಲಿಲ್ಲ. ವಿಧಿಯಿಲ್ಲದೇ ತೆಗ್ಗಿನಮಠಕ್ಕೆ ಬಂದು ಶ್ರೀಗಳವರ ಮುಂದೆ ಭೂತಚೇಷ್ಠೆಯ ಬಗ್ಗೆ ಇದ್ದ ಸಮಾಚಾರವನ್ನು ಅರುಹಿದರಂತೆ ಭಯಭೀತರಾಗಿ ತೆಗ್ಗಿನಮಠದ ಆವರಣದಲ್ಲಿ ಶ್ರೀಗಳವರಲ್ಲಿಗೆ ಬಂದು ಭೂತಶಾಂತಿ ತಮ್ಮಿಂದ ನಡೆಯಲೇಬೇಕೆಂದು ಆಗ್ರಹಿಸಿದರಂತೆ ಅಲ್ಲದೇ ಸ್ಥಳಕ್ಕೆ ಬರುವಂತೆ ವಿನಂತಿಸಿದರಂತೆ ಆ ಸಂದರ್ಭದಲ್ಲಿ ಶ್ರೀಗಳವರು ಭೂತಚೇಷ್ಠೇ ವೀರಶೈವರಿಗೆ ಇರಲೆಂದು ಇಷ್ಟಲಿಂಗವನ್ನು ಶಾಸ್ತ್ರೋಕ್ತವಾಗಿ ಪೂಜಿಸಿದವರಿಗೆ ಭೂತದ ಕಾಟ ತಪ್ಪುವುದಿಲ್ಲವೆಂದು ಉಪದೇಶಿಸಿದರಂತೆ ಅಂದಿನಿಂದ ಈ ಊರಿನ ಜನ ವೀರಶೈವ ಸಂಪನ್ನರಾಗಿ ತ್ರಿಕಾಲದಲ್ಲಿ ಇಷ್ಟಲಿಂಗ ಪೂಜೆಯನ್ನು ನೆರವೇರಿಸಿಕೊಂಡು ಹೋಗುವೆವೆಂದು ಭಾಷೆಯಿತ್ತರಂತೆ ಆಗ ಶ್ರೀಗಳವರು ರಾಮಘಟ್ಟ ಗ್ರಾಮವನ್ನು ಸಂದರ್ಶಿಸಿ ರುದ್ರಾಧ್ಯಯ, ರುದ್ರಾಭಿಷೇಕಗಳನ್ನು ನೆರವೇರಿಸಿದರಂತೆ ಸುತ್ತಮುತ್ತ ಇಪ್ಪತ್ತಾರು ಗ್ರಾಮಗಳ ಸದ್ಭಕ್ತರು ಅದರಲ್ಲಿ ಬಾಗಿಯಾಗಿದ್ದರಂತೆ ಅಂದು ಭೂತವನ್ನು ಹಿಡಿದು ತಂದು ಶ್ರೀಗಳವರು ತೆಗ್ಗಿನಮಠದ ಆವರಣದಲ್ಲಿಯೇ ಸರಪಳಿಯಿಂದ ಕಟ್ಟಿಹಾಕಿದರಂತೆ ಇಂತಹ ಭೂತಚೇಷ್ಠೆ ಇದ್ದವರು ಅಲ್ಲಿರುವ ಭುತವನ್ನು ಆರಾಧಿಸಿ,ಅಂತಹ ಕಾಟದಿಂದ ಮುಕ್ತರಾಗುತ್ತಾರೆ.ಇಂದಿಗೂ ಆವರಣದಲ್ಲಿ ಭೂತವನ್ನು ಸರಪಳಿಯಿಂದ ಬಿಗಿದು ಕಟ್ಟಿರುವುದನ್ನು ಕಾಣಬಹುದು.ಭೂತಕ್ಕೆ ಸಕಾಲದಲ್ಲಿ ಪ್ರಸಾದ ಮತ್ತು ಪೂಜೆಗಳನ್ನು ಮಠದಲ್ಲಿರುವವರು ನೆರವೇರಿಸುತ್ತಾರೆ. ಒಂದು ವೇಳೆ ಸಕಾಲದಲ್ಲಿ ಭೂತಕ್ಕೆ

ಪದ್ಧತಿಯಂತೆ ಪೂಜೆ ಪ್ರಸಾದಗಳು ನಡೆಯದಿದ್ದರೆ ಭೂತನು ಮತ್ತೇ ತನ್ನ ಚೇಷ್ಟೆಯನ್ನು ಪ್ರಾರಂಭಿಸುತ್ತದೆ.ಎನ್ನುವ ಪ್ರತೀತಿ ಇದೆ.ಅಷ್ಟೇ ಅಲ್ಲ ಇಂದು ಆವರಣದಲ್ಲಿ ಭೂತ ಇಡೀ ಮಠವನ್ನೇ ಕಾಯುತ್ತಿದ್ದಾನೆಂಬ ನಂಭಿಕೆಯು ಅಲ್ಲಿದೆ ಭೂತಚೇಷ್ಟೆಗೊಳಗಾದವರು ಅಲ್ಲಿಯ ಭೂತಪ್ಪಯ್ಯನನ್ನು ಭಕ್ತಿಯಿಂದ ಪೂಜಿಸಿದಾಗ ಅದು ಬಿಟ್ಟು ಹೋಗುತ್ತದೆ ಎಂಬ ಬಲವಾದ ನಂಬಿಕೆ ಆ ಪ್ರದೇಶದ ಜನರಲ್ಲಿದೆ ತೆಗ್ಗಿನ ಮಠಕ್ಕೆ ಯಾರೇ ಬೇಟಿ ಕೊಟ್ಟಾಗಲೂ ಅಂತಹ ಭೂತವನ್ನು ಅಲ್ಲಿ ನೋಡಬಹುದು.

ಪ್ರತಿವರ್ಷ ಶ್ರಾವಣ ಮಾಸದಲ್ಲಿ ಮಳೆಯಾಗದೇ ಇರುವ ಸಂದರ್ಭದಲ್ಲಿ ಹರಿಹರ ರಸ್ತೆಯಲ್ಲಿರುವ ಶ್ರೀಗೇಟಿಬಸವಣ್ಣನ ದೇವಸ್ಥಾನಕ್ಕೆ ಹೋಗಿ ಅಲ್ಲಿಯೇ ಅಡಿಗೆ ಮಾಡಿ ದೇವರಿಗೆ ನೈವೇದ್ಯ ಮಾಡಿ ಪ್ರಸಾದ ಸೇವಿಸಿಕೊಂಡು (ಪರ್ವಮಾಡಿ) ಬರುವ ಸಂಪ್ರದಾಯವಿದೆ. ಮಳೆಯಾಗಲೆಂದು ಹೀಗೆ ಹರಕೆ ಹೊರುತ್ತಾರೆ.

### ೭.೫ ದರ್ಶನ

ಶ್ರಾವಣಮಾಸದ ಪ್ರತಿ ಸೋಮವರ ಹರಪನಹಳ್ಳಿಯಲ್ಲಿಯೇ ಇರುವ ಕಾಶಿಮಠಕ್ಕೆ ಹೋಗಿ ಅಲ್ಲಿರುವ ತಮ್ಮ ಗುರುಗಳಾದ ಶ್ರೀ ಚನ್ನವೀರ ಸ್ವಾಮಿಗಳು, ಶ್ರೀ ಗುರುಬಸವ ಸ್ವಾಮಿಗಳು, ಶ್ರೀ ಬಸವಲಿಂಗಶಾಸ್ತ್ರಿಗಳ ಗದ್ದುಗೆಗಳ ದರ್ಶನ ಪಡೆದುಕೊಂಡು ಬರುತ್ತಿದ್ದರು. ವರ್ಷಕ್ಕೆ ಒಂದು ಸಾರಿ ತಪ್ಪದೇ ಪಂಚಪೀಠಗಳಲ್ಲಿ ಒಂದಾದ ಸಮೀಪದಲ್ಲಿರುವ ಉಜ್ಜಯಿನಿ ಇಲ್ಲವೇ ರಂಭಾಪುರಿ ಪೀಠಕ್ಕೆ ದಯಮಾಡಿಸಿ ಗುರುದರ್ಶನ ಪಡೆದುಕೊಳ್ಳುತ್ತಿದ್ದರು. ಈ ಪಂಚಪೀಠಾದೀಶ್ವರರು ಎಲ್ಲೇ ಬಂದರೂ ಅಲ್ಲಿಗೆ ಹೋಗಿ ಅವರ ದರ್ಶನ ಆಶಿರ್ವಾದ ಪಡೆದುಕೊಂಡು ಬರುವ ಪದ್ಧತಿ ತಮ್ಮ ಪೀಠದ ಗೋತ್ರ ಪುರುಷ ಸಿಂಗಟಾಲೂರು ಶ್ರೀವೀರಭದ್ರ ದೇವರ ದರ್ಶನ ವರ್ಷಕ್ಕೆ ಒಂದು ಸಾರಿ ತಪ್ಪದೇ ಆಗುತ್ತಿತ್ತು. ಗುರುದರ್ಶನ, ದೇವತಾದರ್ಶನ, ಇವು ಜೀವನದಲ್ಲಿ ಅವಸ್ಯ ಎಂಬುದನ್ನು ಜನತೆಗೆ ತಮ್ಮ ನಡತೆಯ ಮೂಲಕ ತೋರಿಸಿ ಕೊಡುತ್ತಿದ್ದರು.

### ಸಂಗೀತ

ತೆಗ್ಗಿನ ಮಠ ಶಿವಾಚಾರ್ಯರಿಗೆ ಸಂಗೀತಗಾರರನ್ನು, ಕಲಾವಿದರನ್ನು ಕಂಡರೆ ಅಪಾರ ಅಭಿಮಾನ ಸಂಗೀತ ಪ್ರಿಯರಾದ ಶ್ರೀಗಳವರು ಮಠದಲ್ಲಿ ಸಂಗೀತ ಕಾರ್ಯಕ್ರಮಗಳನ್ನು ಆಗಾಗ್ಗೆ ನಡೆಸುತ್ತಿದ್ದರು. ಹರಪನಹಳ್ಳಿಯವರೇ ಆದ ಸಂಗೀತ ವಿದ್ವಾನ್ ಹರಿಯಮ್ಮನಹಳ್ಳಿ ಶ್ರೀಮರಿ ಕೊಟ್ರಯ್ಯನವರಿಂದ ಸಂಗೀತ ನಡೆಯುತ್ತಿತ್ತು. ಸಂಗೀತದಲ್ಲಿ ಒಳ್ಳೆಯ ಹೆಸರು ಇವರದು. ಸ್ವಾಮಿಗಳನ್ನು ಭಕ್ತಿ ಅಭಿಮಾನಗಳಿಂದ ಕಂಡವರು.[೩]

# ಅಧ್ಯಾಯ: ಎಂಟು

# ಉಪಸಂಹಾರ

ಭಾರತೀಯ ಸಂಸ್ಕೃತಿಯಲ್ಲಿ ಮಠಗಳ ಪಾತ್ರ ಬಹಳ ವೈಶಿಷ್ಟವಾಗಿದೆ. ಸಮಾಜದಲ್ಲಿ ದ್ವೇಶ, ಅಸೂಯೆ, ಮೂಢನಂಬಿಕೆ, ಬಡತನ, ಇನ್ನೂ ಹತ್ತು ಹಲವಾರು ಸಮಸ್ಯೆಗಳಿಂದ ಬಳಲುತ್ತಿರುವ ಜನರನ್ನು ಸನ್ಮಾರ್ಗದತ್ತ ಒಯ್ಯುವಲ್ಲಿ ಶಿವಾಚಾರ್ಯರ ಪಾತ್ರ ಬಹಳ ದೊಡ್ಡದು, ಹರಿಪುರ ತೆಗ್ಗಿನಮಠ ಈ ದಿಸೆಯಲ್ಲಿ ನ್ಯಾಯ, ನಿಷ್ಠೆ, ಭಕ್ತಿ, ಧರ್ಮ, ಜಾಗೃತಿಯನ್ನು ಜನರಲ್ಲಿ ಮೂಡಿಸುವಲ್ಲಿ ವೈಶಿಷ್ಠಪೂರ್ಣ ಕೊಡುಗೆ ಸಲ್ಲಿಸಿದ್ದಾರೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಈ ಮಠ ತನ್ನದೇ ಆದ ಕೊಡುಗೆ ನೀಡಿ ಜನಮನದಲ್ಲಿ ಅಚ್ಚಳಿಯದ ಸ್ಥಾನ ಪಡೆದುಕೊಂಡಿದೆ. ಮಠದ ವತಿಯಿಂದ ದಾಸೋಹ ಪಂಚಾಂಗ ಬಿಡುಗಡೆ ಪ್ರತಿವರ್ಷ ಸಾಮೂಹಿಕ ವಿವಾಹಗಳನ್ನು ನೆರವೇರಿಸುವುದು. ಹಲವಾರು ಸಭೆ ಸಮಾರಂಭಗಳನ್ನು ಕೈಗೊಂಡು ಸಮುದಾಯಭವನ, ಕಲ್ಯಾಣ ಮಂಟಪ, ನಿರ್ಮಾಣ ಮಾಡಿ ಅತಿ ದುಂದು ವೆಚ್ಚಕ್ಕೆ ಕಡಿವಾಣ ಹಾಕಿದ್ದಾರೆ. ಹಳ್ಳಿಗಳಲ್ಲಿ ನಿವೇಶನಗಳು ಇಲ್ಲದವರಿಗೆ (ಮನೆ) ನಿವೇಶನಗಳನ್ನು ನಿರ್ಮಾಣ ಮಾಡಿ ನಿರಾಶ್ರಿತರಿಗೆ ಆಶ್ರಯ ನೀಡುವುದಲ್ಲದೇ ಕೆಲವು ಹಳ್ಳಿಗಳಲ್ಲಿ ರುದ್ರಭೂಮಿ ಇಲ್ಲದೇ ಇರುವ ಊರುಗಳಿಗೆ ಭೂಮಿಯನ್ನು ತಮ್ಮ ಸ್ವಂತ ಹಣದಿಂದ ರುದ್ರಭೂಮಿಯನ್ನು ಸಮಾಜಕ್ಕೆ ದಾನಮಾಡುವದು. ದೇವಸ್ಥಾನಗಳಲ್ಲಿ ಮೂರ್ತಿಸ್ಥಾಪನೆ ಮಾಡಿ ಇನ್ನೂ ಹತ್ತು ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಂಡು ಅಷ್ಟೆ ಅಲ್ಲ ಪ್ರಕೃತಿ ವಿಕೋಪದಿಂದ ಉಂಟಾದ ಗುಜರಾತ್ ಭೂಕಂಪ, ಸುನಾಮಿ ದುರಂತ ಕಾರ್ಗಿಲ್ ಯುದ್ಧದಲ್ಲಿ ಮಡಿದ ಸಂತ್ರಸ್ತರಿಗೆ ನಿದಿಯನ್ನು ಸಂಗ್ರಹ ಮಾಡಿ ತಮ್ಮ ಕೈಲಾದಷ್ಟು ಸಹಾಯ ಮಾಡುವುದರ ಮೂಲಕ ಸಮಾಜ ಉದ್ಧಾರದ ಕಾರ್ಯ ಕೈಗೊಂಡಿದ್ದಾರೆ. ಹಲವಾರು ಶಿಕ್ಷಣ ಸಂಸ್ಥೆ ಕಾಲೇಜುಗಳನ್ನು ಪ್ರಾರಂಭಿಸುವುದರೊಂದಿಗೆ ಹಲವಾರು ನಿರುದ್ಯೋಗ ಅನುಭವಿಸುವ ಯುವಕರಿಗೆ ವೃತ್ತಿ ಶಿಕ್ಷಣ ಒದಗಿಸಿ ಉದ್ಯೋಗಸ್ತರನ್ನಾಗಿ ಮಾಡುವದು. ಹಲವಾರು ಆಯುರ್ವೇದ ಶಿಕ್ಷಣ ಸಂಸ್ಥೆಗಳನ್ನು ತೆರೆದು ಮಾನವರಿಗೆ ಮತ್ತು ಪಶು, ಪಕ್ಷಿ ಗಳಿಗೆ ಬರುವ ರೋಗದಿಂದ ಮುಕ್ತಿ ಹೊಂದುವಂತೆ ಮಾಡುವುದಲ್ಲದೇ ಅದರಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದವರಿಗೆ ಪ್ರತಿಭಾ ಪುರಸ್ಕಾರ ನೀಡುವದು. ಅವಿದ್ಯಾವಂತರನ್ನು ವಿದ್ಯಾವಂತರನ್ನಾಗಿ ಮಾಡಲು ಡಿ.ಇಡಿ. ಮತ್ತು ಬಿ.ಇಡಿ. ಸಂಸ್ಥೆ ತೆರೆದು ಇದರ ಮೂಲಕವಾಗಿ ಸಹಸ್ರಗಟ್ಟಲೇ ಜನರನ್ನು ವಿದ್ಯಾವಂತರನ್ನಾಗಿಸಿದ್ದಾರೆ. ಪ್ರತಿ ವರ್ಷವು ಕಲಾವಿದರನ್ನು, ಪಂಡಿತರನ್ನು ಗುರುತಿಸಿ ಪ್ರವಚನ, ವಿಶೇಷೋಪನ್ಯಾಸ ಮತ್ತು ಪೌರಾಣಿಕ ನಾಟಕಗಳನ್ನು ಬಿತ್ತರಿಸಿ,

ಜನರನ್ನು ಸಂತೋಷಗೊಳಿಸಿ, ನಸಿಸುತ್ತಿರುವ ನಾಟಕ ಕಂಪನಿಗಳನ್ನ ಎತ್ತಿ ಹಿಡಿದು ಕವಿಗಳಿಗೆ, ಕಲಾವಿದರಿಗೆ, ಪಂಡಿತರಿಗೆ, ಅನಾಥ ವಿದ್ಯಾರ್ಥಿಗಳಿಗೆ ತಮ್ಮ ಮಠದಲ್ಲಿ ಆಶ್ರಯಕೊಟ್ಟು ಮಾನವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ್ದಾರೆ. ಗುಡಿ ಗುಂಡಾರ, (ದೇವಸ್ಥಾನ) ಗಳನ್ನು ನಿರ್ಮಾಣ ಮಾಡಿ ಆ ದೇವಸ್ಥಾನದ ಗರ್ಭಗುಡಿಯಲ್ಲಿ ಮೂರ್ತಿಸ್ಥಾಪನೆ ಮಾಡಿ ಹಾಗೂ ಹಲವಾರು ದೈಹಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಶಿಕ್ಷಣವನ್ನು ಒದಗಿಸುವುದಲ್ಲದೇ ಅಲ್ಲಿ ಕಲಿತ ವಿದ್ಯೆಯನ್ನು ಸಮಾಜದ ಜನರಿಗೆ ಕಲಿಸಿಕೊಡುವಂತೆ ಪ್ರೇರೇಪಿಸುವುದರಿಂದ ಆಗ ಜನರು ದೈಹಿಕವಾಗಿ ಸಬಲರಾಗುತ್ತಾರೆ ಮತ್ತು ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಿಸುವದು. ಕಳ್ಳರನ್ನು ನಿಷ್ಠಾವಂತರನ್ನಾಗಿ ಮಾಡುವುದಲ್ಲದೇ ವಿವಿದ ರಂಗದಲ್ಲಿ ಸೇವೆ ಸಲ್ಲಿಸಿದ ಸಮಾಜದಲ್ಲಿ ಜನಮನ್ನಣೆಯನ್ನು ಪಡೆದ ವ್ಯಕ್ತಿಗಳನ್ನು ಗುರುತಿಸಿ ಅವರುಗಳನ್ನು ಗವರವಿಸಿ ಮಠದಿಂದ ಅವರಿಗೆ ಪ್ರಶಸ್ತಿ ಪತ್ರಗಳನ್ನು ನೀಡುತ್ತಾರೆ. ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಂಡು ಜಾತಿ, ಮತ, ಪಂಥವೆನ್ನದೇ ಮಾನವರೆಲ್ಲರೂ ಸಮಾನರು ಎಂದು ಸಮಾನತೆ ಸೃಷ್ಠಿಸುವಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ. ಹಸಿದು ಬಂದ ಅನಾಥರಿಗೆ ಪ್ರಸಾದದವ್ಯವಸ್ಥೆ ಮಾಡಿ ಬಡತನದ ಹಸಿವನ್ನು ಮಾನವನ ದೇಹ ಆವರಿಸಿರುವುದನ್ನು ಮುಕ್ತಿ ಹೊಂದುವಂತೆ ಮಾಡಿದ್ದಾರೆ.

ಒಂದನೆಯ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶ ಸ್ವರೂಪ, ಮತ್ತು ವ್ಯಾಪ್ತಿಯ ಪರಿಚಯ ಮಾಡಿಕೊಡಲಾಗಿದೆ. ಎರಡನೆಯ ಅಧ್ಯಯನದಲ್ಲಿ ಹರಪನಹಳ್ಳಿಯ ಪ್ರದೇಶದ ಸುತ್ತಮುತ್ತಲ ಸಾಂಸ್ಕೃತಿಕ ನೋಟದ ಬಗ್ಗೆ ಹೇಳಲಾಗಿದೆ. ಮೂರನೆಯ ಅಧ್ಯಯದಲ್ಲಿ ತೆಗ್ಗಿನಮಠದ ಹುಟ್ಟು ಮತ್ತು ಬೆಳವಣಿಗೆಯನ್ನು ವ್ಯಕ್ತಪಡಿಸಲಾಗಿದೆ. ನಾಲ್ಕನೆಯ ಅಧ್ಯಯದಲ್ಲಿ ಶಿವಾಚಾರ್ಯರ ಪವಾಡಗಳ ಬಗ್ಗೆ ಪರಿಚಯ ಮಾಡಿಕೊಡಲಾಗಿದೆ. ಐದನೆಯ ಅಧ್ಯಯದಲ್ಲಿ ಶಿವಾಚಾರ್ಯರ ಸಾಧನೆ ಮತ್ತು ಶೈಕ್ಷಣಿಕ ಸಂಸ್ಥೆಗಳ ಹೆಸರುಗಳನ್ನು ಹೆಸರಿಸಲಾಗಿದೆ. ಅಧ್ಯಾಯ ಆರರಲ್ಲಿ ಜನಪರ ಕಲ್ಯಾಣ ಕಾರ್ಯಕ್ರಮಗಳಾದ ಉಚಿತ ಸಾಮೂಹಿಕವಿವಾಹ ಶೋಷಣೆಗೆ ಒಳಗಾದ ಪ್ರದೇಸದಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ತೆರೆದು ಎಲ್ಲರು ಸಮಾನರೆಂದು ಸನ್ಮಾರ್ಗವನ್ನು ಮುಂದಿನ ಪೀಳಿಗೆಗೆ ತೋರಿಸಿದ್ದಾರೆ. ಅಲ್ಲದೆ ತೆಗ್ಗಿನಮಠವನ್ನು ಕುರಿತು ನಂಬಿಕೆ ಸಂಪ್ರದಾಯ, ಆಚರಣೆ, ಉತ್ಸವ, ಜಾತ್ರೆಗಳ ಬಗೆಗೆ ಪರಿಚಯ ಮಾಡಿಕೊಡಲಾಗಿದೆ. ಎಂಟನೇ ಅಧ್ಯಯದಲ್ಲಿ ಛಾಯಚಿತ್ರಗಳು, ಆಕರಗ್ರಂಥಗಳು, ಅನುಬಂಧದಲ್ಲಿ ಹಾಡುಗಳು. ವಕ್ತೃವಿವರ, ವರ್ಷದ ಸಾಮೂಹಿಕ ವಿವಾಹದ ಆಹ್ವಾನಪತ್ರಿಕೆ ಹರಪನಹಳ್ಳಿ ಮಠದ ಬಗ್ಗೆ ಸುತ್ತಮುತ್ತಲ ಹಳ್ಳಿಗಳಲ್ಲಿಯ ಜನಪದ ತ್ರಿಪದಿಗಳ ಪರಿಚಯ ಮಾಡಿಕೊಡಲಾಗಿದೆ.

# ಅನುಬಂಧ

## ಹಾಡುಗಳು

**ಹರಪನಹಳ್ಳಿ ಕುರಿತು ಹಾಡು**

ಹೇ ಸಭೆದೊಳಗೆ ಸಾರಿ ಹೇಳುವೇನು ಬಾರಿ
ಹರಪನಹಳ್ಳಿಯಾಗ ನಡೆದ ಸುದ್ಧಿಯನಾ,
ಸಭೆದೊಳಗೆ ಸಾರಿ ಹೇಳುವೇನು ಬಾರಿ
ಹರಪನಹಳ್ಳಿಯಾಗ ನಡೆದ ಸುದ್ಧಿಯನಾ
ಒಬ್ಬ ಮಾದಿಗ ತಾನಮನೆಯೊಳ ಹೆಂಡತಿ ಬಿಟ್ಟು
ನಿತ್ಯ ತಿರುಗುತ್ತಿದ್ದ ಸಂಚರನಾ

    ಪರಸ್ತ್ರೀಯರ ಮಾತಕೇಳಿ ಒಂದನೊಂದ ದಿನ
    ಮನೆಯುಳ್ಳ ಹೆಂಡತಿಗಾದ ಸುಮ್ಮ ಸುಮ್ಮನಾ
    ೬೯ ನೇ ಇಸ್ವಿ೧೨ ನೇ ತಾರೀಖು
    ಹರಪನಹಳ್ಳಿ ಕಾಳವ್ವ ಜಾತ್ರಿಪೂರಾ

ಅಗಂಬ, ಅಗಂಬ ಸುದ್ದಿ ಕೇಳಿ ಖುಷಿಯಾದಳಾ ಬಾಲೆ
ಅಡಿಗೆ ಮಾಡಕ ತಯ್ಯಾರಾದಳಲ್ಲಾ
ಅರೇ ರೊಟ್ಟಿಯ ಸುಟ್ಟು ಅಚ್ಚೇರ್ ಅಕ್ಕಿಯ ಇಟ್ಟು
ಅಡುಗೆ ಮಾಡ್ಯಾಳ ಬೆಳ ಬೆಳತನಾ

    ಕಟ್ಟಿದ ಬುತ್ತಿಗಂಟು ಹುರವಂಟು ಬರುವಾಗ
    ಬಗ್ಗಿ ಬಡದೀತು ಬಾಗಿಲ ಸವಕಟ್ಟಿನಾ
    ಹಸಿವು ಆಯಿತೆಂದು ಊಟಕ್ಕೆ ತಾನೋದ
    ಇಸವು ಆಯಿತು ಮಾಡಿದ ಅನ್ನವನಾ

ಅತ್ತ ಆಲದ ಮರ ಸುತ್ತ ಬೇವಿನ ಮರ
ಮಸದ ನಿಂತಾನ ಕೈಯಾಳ ಖಡ್ಗವನಾ
ಕೊಲ್ಲಬ್ಯಾಡಿರಿ ಸ್ವಾಮಿ ಕೈಮುಗಿದು ಬೇಡುವೇನು
ಏನು ಮುಗಿದರೂ ಸ್ವಾಮಿ ಬಾಗುವರು.

ಹೊಟ್ಟೆ ಕೋಯ್ದರೆ ಕೋಣಾ ಹಾರಿ ಹೋಯಿತು ಪ್ರಾಣ
ಮರಣವೆಂದೇಳುವುದುಆರಾ ದೀನಾ
ಹಾಲು ತರುವ ಜಾಣೆ ಹಿಡಿದಾಳೆ ಮಗಳ ಕುನಾ
ತಂದಿ-ತಾಯಿಗ ಸುದ್ದಿ ಮಾಡ್ಯಾಳಲ್ಲ.
ಎಳೆಯ ಮುಖದ ಬಣ್ಣ ಸುಳಿದರೇ ಬಾಳೆ ಹಣ್ಣ
ಮರಣ ಹೊಂದಿರುವುದು ಆರಾ ದಿನಾ

ಸಭೆದೊಳಗೆ ಸಾರಿ ಹೇಳುವೇನು ಬಾರಿ
ಹರಪನಹಳ್ಳಿಯಾಗ ನಡೆದ ಸುದ್ಧಿಯನಾ
ಹೇ ಜುಮತಕ, ಜುಮತಕ.

ಹಾಡಿದವರು:
ಕೆರೆಹಳ್ಳಿ ಹನುಮಂತಪ್ಪ ಮತ್ತು ಸಂಗಡಿಗರು ಕೋಡಿಹಳ್ಳಿ

### ವೀರಣ್ಣನ ಉತ್ಸವ (ಕೋಲಾಟ ಪದ)

ವೆಂಕಟಾಚಾರ ಅದು ದೊಡ್ಡ ನಗರ
ಮೋಜಿನ ಹರ್ಷಕ್ಕ ಕೆರೆಯ ದಾಂಡೇಲಿ
ಮೂರುತಿಯಾದನು ಈರಣ್ಣ ದೇವರಾ

ಗೌಡ್ರು ಶಾಂಭವ ಬುದ್ಧಿವಂತರಾಗಿ
ದೊಡ್ಡ ದೊಡ್ಡ ಯಜಮಾನ್ರಕರಿತವರಾ
ದೊಡ್ಡ ದೊಡ್ಡ ಯಜಮಾನ್ರಕರಿತವರಾ, ಆಯ್ತ ವಾರವ

ತೇರಿನ ಸಾಮಾನ ಹೊರಾಕ ಹಾಕಿದರಾ
ತೇರಿನ ಸಾಮಾನ ಹೊರಾಕ ಹಾಕಿದರಾ, ಗಾಲಿ
ಸುತ್ತಾ ಮುತ್ತಾ ಏನೇನ ಬಿಡಿಸವರಾ,
ಚಿತ್ತಾರಾ ಬಿಡಿಸವರಾ

ಆ ಯುಗಾದಿ ಆಗಿ ಒಂಭತ್ತು ದಿನಕೆ
ಕಂಕಣ ಕಟ್ಟೈತೆ
ತೇರಿನ ಸುತ್ತಾಮುತ್ತಾ ಪಟ್ಟಣ ಕಟ್ಯಾರ
ಹಸಿರು ಹಳದಿ ಕೆಂಡ
ತೇರಿನ ಮ್ಯಾಲೆ ಕಳಸನ ನೋಡಿದ
ತಳ ತಳ ಬಂಗಾರ,

ಕೇರಿ ಸುತ್ತಕೇ ಬಜಾರದಾಗೆ
ಈರಣ್ಣಾ ದೇವರಾ
ಸಾಂಕು ಜಗಕ್ಕೆ ಮಡುತಾರ
ನೆಲೆಯಿಲ್ಲ ದಾಸಾರ
ತೇರು ವಜಿ ಎಳೆತಾರ ಬಂದು
ಪರಿಸರ ಜನರೆಲ್ಲಾ.

ಹಾಡಿದವರು:
ಸಂಗಪ್ಪನವರ ಗೋಣೆಬಸಪ್ಪ ಮತ್ತು ಸಂಗಡಿಗರು, ಕೋಡಿಹಳ್ಳಿ

## ಚಿಗರಿಯ ನಿಷ್ಠೆ (ಕೋಲಾಟದ ಪದ)

ಅರ್ಥಮಾಡಿ ದೃಷ್ಟಲಿಂದ ಕುಂತರಿ ಜನ
ಅ– ಹೇಳುತೀನಿ ಕೇಳೊಂದು ಚಿಗರಿಬಯ್ಯನ
ಚಿಗರಿ ಮಾಡಿತ ಹೆಸನವನ ॥ ಪ ॥

ಹೇ ಅಡಿವ್ಯಾಗ ಬಂದ ಹೆಣ್ಣ ಚಿಗರಿ
ಸರಪಳಿ ನಿತ್ಲೋಣ, ಅದು ಇಯ್ಯೋಣ
ಹೇ ನೀರಡಿಸಿ ಬಾಯಾರಿ ಬಂತೋ ಚಿಗರಿನಾ
ಬಾವಿಹತ್ತರೇಕಿನ್ನ

ಹೇ ಅದ್ ಜಾಡಿಗೆ ಬಲಿಊಡಿ ಕುಂತಾರೋ ಜನಾ
ಓಡಿ ಬಂದು ಬಿದ್ದೈತೋ ಅದ ಬಲಿಯಾಗ
ಚಿಗರಿ ಮಾಡೆತಿ ಹೆಸನವನ ॥ ಪ ॥

ಹೇ ಮಕ್ಕಳಿಗೆ ಮೊಲೆ ಕೊಟ್ಟು ಬರತನೋ ನಾನು
ನಿಮಗೆ ನಂಬಿಗಿಲ್ಲೇನೋ ?

ಹೇ ಓಡಿಹೋಗಿ ಕೂಡಿತೋ ತನ್ನ ಬಳಗನಾ
ಚಿಗರಿ ಮಾಡ್ಯೆತಿಎಸನವನಾ ॥ ಪ ॥
ಬರ್ರೋ ಮಕ್ಳಾ ಮಲಿ ಕೂಡಿರಿ ನೀವಿ ಇನ್ನೂ
ಹೇ ಖಡ್ಗಳೊಳಗೆ ವಚನ ಕೊಟ್ಟು ಬಂದನೋ ನಾನು
ತಿರುಗಿ ಹೋಗಲೇ ಬೇಕಿನ್ನು ಹೇ
ಜಮತಕ, ಜಮತಕ,

ಹಾಡಿದವರು:
ಕೆಸರಹಳ್ಳಿ ಹನುಮಂತಪ್ಪ ಮತ್ತು ಸಂಗಡಿಗರು, ಕೋಡಿಹಳಿ

## ಚೆಂದದಿಂದ ಬೆಳಗಿದ ದೀಪ

ಗ್ರಾಮೋದ್ಧಾರ - ದೇಶೋದ್ಧಾರಕನಾಗಿ
ಬೆಳಗುವ ಚಂದ್ರನ ಬೆಳಕಿನ
ಚಂದ್ರಮೌಳೀಶ್ವರರ ನಂದಾ ದೀಪ

ವಿದ್ಯೆ ಎಂಬ ಬೆಳಕಿನಲ್ಲಿ
ಜ್ಞಾನ ಎಂಬ ಶಾಲೆಯಲ್ಲಿ
ದೇಶ ವಿದೇಶಗಳಲ್ಲಿ ಹರಡಿದಂತಹ
ಆನಂದದ ದೀಪ

ಓದಿನ ಜ್ಞಾನವ ಹೆಚ್ಚಿಸಿದ ದೀಪ
ಧರ್ಮದ ಜ್ಞಾನ ಹೆಚ್ಚಿಸಿದ ದೀಪ
ದಾಸೋಹ ಮಠವ ಬೆಳೆಸಿದ ದೀಪ
ಮುಂದಿನ ಲೋಕದ ನಂದಾ ದೀಪ
ಚಂದ್ರಮೌಳೀಶ್ವರ ಚಂದದಿ ಬೆಳಗಿದ ದೀಪ
ಮಸಲ್ವಾಡ ವಿರೇಶನ ಬೆಳಗಿದ ದೀಪ

## ಹಾಡುಗಳು

ಕಟ್ಟಿ ಮ್ಯಾಲೆ ಇರುವ ಹೊಟ್ಟಿ ಬಸವಣ್ಣ ನಿನಗೆ
ಮಟ್ಟ ಮಟ್ಟ ಕಾಯ ಒಡಸೇನ
ಮಟ್ಟ ಮಟ್ಟೀಲಿ ಕಾಯಿ ಎನೆಂದು ಒಡಸಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಅಂಗಳದಾಗ ಇರುವಗುಂಡು ಧರ್ಮಣ್ಣ
ನಿನಗಡ ಖಂಡಗದ ಕಡಲಿ ಪನಿವಾರ
ಖಂಡಗದ ಕಡಲಿ ಪನಿವಾರ ಎನೆಂದು ಮಾಡಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಹತ್ತಿಯ ಎಲಿ ಹಾಂಗ ಹತ್ತು ರೊಟ್ಟಿಯ ಸುಟ್ಟು
ಹೊತ್ತೀಲೆ ಒಯ್ದು ಒಳಗಿಟ್ಟೆ ಸೋಮಕ್ಕ
ಪುತ್ರನ ಕರಕೊಂಡು ಉಣಲಿಲ್ಲ
ಆಲದ ಎಲಿ ಹಾಂಗ ಆರು ರೊಟ್ಟಿಯ ಸುಟ್ಟೆ
ವಾರೀಲೆ ಒಯ್ದು ಒಳಗಿಟ್ಟೆ
ವಾರಿಲೆ ಒಯ್ದು ಒಳಗಿಟ್ಟೆ ಸೋಮಕ್ಕ
ಬಾಲನ ಕರಕೊಂಡು ಉಣಲಿಲ್ಲ

ಕರಿದ ಕರ್ಚಿಕಾಯಿ ಕರದಂಗ ಆದಾವ
ಗಡಿಗಾಳ ತುಪ್ಪ ಸವದಾವ
ಗಡಿಗಾಳ ತುಪ್ಪ ಸವೆದಿಲ್ಲ ಸೋಮಕ್ಕ
ಪುತ್ರನ ಕರಕೊಂಡು ಉಣಲಿಲ್ಲ

ಮಾಡಿದಂತಾ ಅಡಗಿ ಮಾಡಿದಂಗ ಐದಾವೆ
ಸ್ವಾರೇಳ ತುಪ್ಪ ಸವಿದಿಲ್ಲ ಸೋಮಕ್ಕ
ಪುತ್ರನ ಕರಕೊಂಡು ಉಣಲಿಲ್ಲ
ಗಂಜಿಯ ಹಚ್ಚಡ ಹಿಂಬಡಕೆ ತೆರವುತ್ತ
ತಂದರು ಪುಟ್ಟರಸನ ಹೊರಾಕ್ಕ

ಅಂದಕ ಹರಪನಹಳ್ಳಿ ಚಂದಕ ಚಾರಿಬೈಲಿ
ಚಂದ್ರವತಿ ಅಂಬ ಹಿರೇಕೆರೆ
ಚಂದ್ರಮತಿ ಅಂಬ ಹಿರೇಕೆರೆ ಏರೀಮ್ಯಾಲೆ
ತಿದ್ದಿಟ್ಟರವ್ವ ಚಲುವಾನ ಹಣೆ ಮೇಲೆ
ತಿದ್ದಿಟ್ಟರವ್ವಾ ತಿಳಿನಾಮ

ಏರಿಯ ಹತ್ತೀರಿ ಸಾರಿರಿ ಡಂಗುರ
ಜೋಗರಣ್ಣನ ಕರಿಸ್ಯಾರ
ಜೋಗರಣ್ಣನ ಕರಿಸ್ಯಾರ ರೇವಕ್ಕನ
ಕಟ್ಟಿದ ಕರಿಮಣಿ ತೆಗಿಸ್ಯಾರ

ಏರಿಯ ಹತ್ತೀರಿ ಸಾರಿರಿ ಡಂಗುರ
ಬಳಿಗಾರಣ್ಣನ ಕರಿಸ್ಯಾರ
ಬಳಿಗಾರಣ್ಣನ ಕರಿಸ್ಯಾರ ರೇವಕ್ಕನ
ಕಾಜಿನ ಬಳೆಯ ತಗಿಸ್ಯಾರ

ಏರಿಯ ಹತ್ತೀರಿ ಸಾರಿರಿ ಡಂಗುರ
ಮುತ್ತಾಗರಣ್ಣನ ಕರಿಸ್ಯಾರ
ಮುತ್ತಾಗರಣ್ಣನ ಕರಿಸ್ಯಾರ ರೇವಕ್ಕನ
ಮುತ್ತಿನ ಮುಗುತಿ ತೆಗಿಸ್ಯಾರ

ಏರಿಯ ಹತ್ತೀರಿ ಸಾರಿರಿ ಡಂಗುರ
ಕಂಚುಗಾರಣ್ಣನ ಕರಿಸ್ಯಾರ
ಕಂಚುಗಾರಣ್ಣನ ಕರಿಸ್ಯಾರ ರೇವಕ್ಕನ
ಕಂಚಿನ ಕಾಲುಂಗುರ ತೆಗಿಸ್ಯಾರ

ಅಕ್ಕಿಯ ಬಾನ ಉಕ್ಕಿ ಉಕ್ಕಿ ಕುದಿವಾಗ
ತಾಯಿ ಸೋಮಕ್ಕ ಅಳದೀರೆ
ತಾಯಿ ಸೋಮಕ್ಕ ಅಳದೀರೆ ನಿನ ಮಗ
ದೇವರಾಗಿ ಹೋದ ಕೈಲಾಸದಾಗ
ಸಂಗ್ರಹ: ಬಡಿಗಣ್ಣೇರ ಕೊಟ್ರಮ್ಮ, ಗಂಡ ಹಾಲಪ್ಪ ಹಿರೇಕುರುಬರಕೇರಿ ಹರಪನಹಳ್ಳಿ

## ಕಾಲೇರಿ

ಕಾಲೇರಿ ಕರೆಸಿರಿ ! ಕಾಗದ ಬರಸೀರಿ
ಸುರಮುರಕ ಕಾಗದ ! ಸುರಮುರಕ ಕಾಗದ ಕಳಿಸೀರಿ ರನ್ನದ // ಕೋಲು//

## ಜಂಬಣ್ಣ

ದಾಗಡಿ ಬಳ್ಳೀಗೆ ಹೂಡ್ಯಾರ ಎಂಟೆತ್ತು
ಬೋರ್ರ್ಯಾಡುತಾವ ಹೊಲದಾಗ
ಬೋರ್ರ್ಯಾಡುತಾವ ಹೊಲದಾಗ
ಜಂಬಣ್ಣ ಜೋಳದ ಮ್ಯೆಲೆದ್ದು ಮಲಗ್ಯಾನ

ಉಗ್ರಾಣೀ ಬಳ್ಳೀಗೆಹೂಡ್ಯಾರ ಎಂಟೆತ್ತು
ಬೋರ್ರ್ಯಾಡುತಾವ ಹೊಲದಾಗ
ಬೋರ್ರ್ಯಾಡುತಾವ ಹೊಲದಾಗ
ರಾಗಿ ಮ್ಯೆಲೆದ್ದು ಮಲಗ್ಯಾನ

## ಪುಟ್ಟರಸ (ಜಂಬಣ್ಣ)

ಚಿಕ್ಕೇನ ಪುಟ್ಟರಸ ಹುಟ್ಯಾನೆಂಬುದ
ಚಿಕ್ಕ ನಗರದ ದೊರೆ ಕೇಳಿ
ಮುತ್ತಿನ ತೊಪ್ಪಿಗಿ ಕಳಿವ್ಯಾನ
ಕೂಲಹಳ್ಳಾಗಿರುವ ಗೋಣೆಣ್ಣನಿಗೆ

ನೂಲ ಎಳೆ ಮೇಲೆ ಬರುತೇನೊ
ನೂಲ ಎಳೆಮೇಲೆ ಏನೆಂದು ಬರಲಿ ಶಿವನೆ
ಬಾಲ ಪುಟ್ಟರಸ ಉಳುದಾರೆ

ಬಾಗಳಿ ಬಳಿಗೆ ಬಾಗಳಿ ಕಲ್ಲಣ್ಣ ನಿನಗೆ
ಬಾಗಲಿಕೆ ಬಂಗಾರ ಬಿಗಿಸೇನು
ಬಾಗಲಕ ಬಂಗಾರ ಏನೆಂದು ಬಿಗಿಸಾಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ
ಉಜ್ಜಣಿ ಒಳಗಿರು ಉಜ್ಜಣಿ ಸಿದ್ದಣ್ಣನಿನಗೆ
ಗೆಜ್ಜೇದ ತೇರ ಎಳಸೇನ
ಗೆಜ್ಜೆಯ ತೇರ ಏನೆಂದು ಎಳಸಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಕೊಟ್ಟೂರಾಗಿರುವ ಕೊಟ್ರಬಸಪ್ಪ ನಿನಗೆ
ಕಟ್ಟೇದ ತೇರ ಎಳಸೇನು
ಕಟ್ಟೇದ ತೇರ ಏನೆಂದು ಎಳಸೇನು ಶಿವನೆ
ಬಾಲ ಪುಟ್ಟರಸ ಉಳಿದಾರೆ

ದಾವಣಗೇರ್ಯಾಗಿರುವ ದಾವಣಗೇರಿ ದುರುಗಮ್ಮ
ನಿನಗೆ ಜೋಡು ಎರಡು ಬ್ಯಾಟಿ ತರುವೆ
ಜೋಡು ಎರಡು ಬ್ಯಾಟಿನ ಏನೆಂದು ತರಲಿ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಅರಸಿ ಕೇರ್ಯಾಗಿರುವ ದಂಡಿಯ ದುರುಗಮ್ಮ ನಿನಗೆ
ಮುತ್ತೀನ ದಂಡಿನ ಉಡಿಯಕ್ಕಿ
ಮುತ್ತೀನ ದಂಡಿ ಏನೆಂದು ತರಿಸಾಲ ಶಿವನೆ
ಬಾಲ ಪುಟ್ಟರಸ ಉಳಿದಾರೆ

ಮೈಲಾರದಾಗಿರುವ ಮೈಲಾರ ನಿಂಗಣ್ಣ ನಿನಗೆ
ಕೋರಿ ಅಂಗಿ ಕಳಿವ್ಯೇನ
ಕೋರಿ ಅಂಗಿ ಏನೆಂದು ತರಲೊ ಶಿವನೆ
ಬಾಲ ಪುಟ್ಟರಸ ಉಳಿದಾರೆ

## ಲಾವಣಿ ಪದ

### ಮುಂಡರಗಿ ಭೀಮರಾವ್ (ಪ್ರಥಮ ಸ್ವಾತಂತ್ರ್ಯ ಸಂಗ್ರಾಮ)

ದೀರದಂಗೆಯ ಸರದಾರರಿಗೆ ಸರಿಯಾರು ಇರುವಿರಿ ಜಗದೊಳಗೆ ಸಾರಿ ಹೊಡೆದು ಹನ್ನೆರಡು ಗಂಟೆಗೆ ಸೂರಿ ಮಾಡಿದ ಭೀಮರಾಯ ಧೋರಿ ॥ ಪ ॥

೧. ಹಿಂದೂ ದೇಶ ಗೆದ್ದು
ಕಂಪನಿ ಸರಕಾರ , ಕಠಿಣ ಹುಕುಂ ಮಾಡಿದರು
ದೊಡ್ಡ ದೊಡ್ಡ ಕಿಲ್ಲೇವುಗಳ ಕೆಡವಿದರು
ಮೀರಿದ ಧೊರೆಗಳ ಸೆರೆ ಹಾಕುವರು
ತಪ್ಪಿಲೆ ಸಿಕ್ಕರೆ ಯಾರನ್ನು ಬಿಡದವರು
ಬೀತಿಯ ಆಳ್ವಿಕೆಯ ನಡೆಸುವರು
ಧರ್ಮರಾಜ್ಯವನ್ನಾಳುವರು ಹಮ್ಮಿಗೆ ದೇಶಾಯರು
ಇದು ತಿಳಿದು ತಿಳಿದು ಹಗೆ ಮಾಡಿದರು
ಸಾವಿರದೆಂಟುನೂರ ಐವತ್ತೆಂಟರಲಿ
ಪ್ರಖರ ಪ್ರಳಯ ಕೆಡಮಾಡಿದರು ॥ ೧ ॥

೨. ಮದ್ದುಗುಂಡು ಸೋರುಪ್ಪು ಗಂಧಕ ಆಯುಧಗಳು ಇದ್ದವರು ।
ಭಾರಿ ಶಿಕ್ಷೆಗೆ ಒಳಗಾಗುವರು ! ಕಂಪನಿಯವರು ಸಾರಿ ಹೇಳಿದರು ।
ದೇಶವನ್ನೆಲ್ಲಾ ಸೋಸಿ ನೋಡಿದರು! ತೀವ್ರ ಪತ್ತೆ ಕಾರ್ಯ ನಡೆಸಿದರು ।
ಇಳುವು "ಮದ್ದು ಗುಂಡು ಭಲ್ಲೆ, ಕತ್ತಿ, ಕಠಾರಿ, ಬಂದೂಕ್, ಫಿರಂಗಿ
ಕೊಂಡಿರೆಂದರು ॥ ೨ ॥

೩. ಎಲ್ಲಿ ಹಮ್ಮಿಗಿ! ಎಲ್ಲಿ ದೇಶಾಯಿ! ಎಲ್ಲಿ ಮದ್ದುಗುಂಡೆನುತ ।
ಠಾಣೆ ಪೋಲಿಸ್ ಪಡೆ ಕುಣಿಯುತ್ತ ! ಹಮ್ಮಿಗಿ ಬಳಿಗೆ ಬಂತು ಬಲು
ತುರ್ತಾ ! ಶಾನ್ಯಾವ ಕರಿಸ್ಯಾರಾ ಉರ್ದೋಗುತ ! ಮದ್ದು ಗುಂದು ತಮಗೆ
ತೋರೆನುತ " ಇಳುವು" ಮೆಲ್ಲ ಮೆಲ್ಲಗಿದರು ಕೊಲ್ಲಬಂದರೆಂದು
ನಿಲ್ಲದೋಡಿದ ದೇಶಾಯಳುತ ॥ ೩ ॥

೪. ಹೆಂಬಳ್ ದೇಶಗತ್ತ ಮಾಲಕರಿದ್ದ ಮೊಂಡ್ಯೆ ಭೀಮರಾಯರಿಗೆ
ಪಾತ್ರರು ಭೀಮರಾಯ ಮುಂಡರಗಿ ! ಬಳ್ಳಾರಿ ಹರಪನಹಳ್ಳಿ ಭಾಗ
ದೊಳಗೆ ತಹಸೀಲ್ದಾರರಿದ್ದರು ಸಖರಂತೆ ! ಹಡಗಲಿ ಪ್ರಾಂತವದಕೆ ಸೇರಿ
ದಂತೆ " ಇ" ದಂಗೆಯ ಶಕ ಮುಚ್ಚಿ ಹಳ್ಳಿಗಲ್ಲೇವ ಕೊಳ್ಳೆ ಒಡೆದು ಹಣ ಕೂಡಿಸಿದ ॥ ೫ ।
೫ ಮೀರಿದ ವ್ಯರಿಯ ಮಣ್ಣುಗೂಡಿಸಲು ವೀರರೆಲ್ಲ ಸೇರಿದರು !
ಮೀರಾಕೋರ್ನಹಳ್ಳಿ ರಾಯನಗೌಡನ, ಗೋವನ್ ಕೊಪ್ಪದ ಸರ್ ನಾಡ
ಗೌಡ , ಹಮ್ಮಿಗಿ ದೇಶಾಯಿ ಕೆಂಚನಗೌಡ ಡೊಂಬಳ ತಾಲೂಕ
ದೇಶಾಯಿ ಗೌಡ "ಇ" ಹಳ್ಳಿ ಪಳಿಗಳನ್ನೆಲ್ಲ ಶೋಧಿಸಿಕ್ಯೆದು ಗಳನೆ ಶೇಖರಿಸಿದರು

೬ ಕಷ್ಟ ಬಂದ ಕಾಲಕ್ಕೆ ಮಾತುಗಳೆಷ್ಟಿದ್ದರು ಆಡಬಾರದು ।
ಮರು ಬಂದ ಕಾಲಕ್ಕೆ ಇರಬಾರದು । ಕಂಪನಿಯವರ ಮೇಲೆ ಕತ್ತಿ
ಹಿರಿದು ಹೊಕ್ಕರು ಟೇಪು ಬಾಜರನ ಮುಂದು ಮುಂದಾಗುವದಿಲ್ಲವೆ
ನೆನೆದು ದಿಟ್ಟ ಭೀಮರಾಯ ಮುಟ್ಟಿ ಹಣೆಗಳನದೃಷ್ಟಕೆ
ಮೀಸೆ ಮುರಿದನು.

೭ ನಡಿ ನಡಿ ದೇಶಾಯಿ ಹಿಡಿ ಹಿಡಿ ಕತ್ತಿಯ ಹೊಡಿಹೊಡಿ ಕುದುರೆಯ
ನೆರಿ ಹರೆಯದ ಭಾರಿ ಸಾಹಿಬರಿಬ್ಬರು ! ಎನ್ನುತ ಇನ್ನೂರ
ಬಂತರ್ನ ಕರಿಸ್ಯಾರ ! ಹಮ್ಮಿಗಿ ಪೂರ್ವಸ್ಥಲಕೆ ಬಂದಾರು ! ಶಾನ್ವಾವ್ನ
ಕಿವಿ ಮೂಗು ಕೊಯಿಸಿದರು "ಇ" ಬಂದ ಪೋಲಿಸರ ಹೊಡೆದು
ಬಡಿದು ಬಹುದುಂದಕರಾರ್ ಮಾಡಿದರು ॥ ೭ ॥

## ವಕ್ತೃ ವಿವರ

| ಕ್ರಸಂ | ಹೆಸರು | ವೃತ್ತಿ | ವಯಸ್ಸು | ಸ್ಥಳ |
| --- | --- | --- | --- | --- |
| ೧. | ಶ್ರೀ ಷ.ಬ್ರ. ಚಂದ್ರಮೌಳೀಶ್ವರಸ್ವಾಮಿಗಳು | ಸಮಾಜ ಸುಧಾರಣೆ | ೭೦ | ಹರಪನಹಳ್ಳಿ |
| ೨. | ಶ್ರೀ ಎಂ. ಪಿ. ಎಂ. ಶಾಂತವೀರಯ್ಯ | ಹಿರಿಯ ಉಪನ್ಯಾಸಕರು | ೫೩ | ಹರಪನಹಳ್ಳಿ |
| ೩. | ಡಾ. ಮಂಜುನಾಥ ಬೇವಿನಕಟ್ಟಿ | ಪ್ರಾಧ್ಯಾಪಕರು | ೪೬ | ಕನ್ನಡ ವಿ.ವಿ. ಹಂಪಿ |
| ೪. | ಶ್ರೀ ಟಿ. ಎಂ. ಚಂದ್ರಶೇಖರಯ್ಯ | ಕಾರ್ಯದರ್ಶಿಗಳು ಟಿ. ಎಂ. ಎ. ಇ. ಸಂಸ್ಥೆ | ೫೯ | ಹರಪನಹಳ್ಳಿ |
| ೫. | ಶ್ರೀ ಸರ್ಪಭೂಷಣ ಶಿವಯೋಗಿಗಳು | ಉಪನ್ಯಾಸಕರು | ೫೫ | ಹರಪನಹಳ್ಳಿ |
| ೬ | ಶ್ರೀ ಎಂ ಶಿವಲಿಂಗಪ್ಪ | ಉಪನ್ಯಾಸಕರು | ೫೬ | ಹರಪನಹಳ್ಳಿ |
| ೭ | ಶ್ರೀ ಹೆಚ್. ಜಿ. ಎಂ. ಜಯದೇವ | ಸಹ ಶಿಕ್ಷಕರು | ೫೦ | ಹರಪನಹಳ್ಳಿ |
| ೮. | ಶ್ರೀ ಎ. ಸಿ. ಚಿಕ್ಕಮಠ | ಉಪನ್ಯಾಸಕರು | ೫೫ | ಹರಪನಹಳ್ಳಿ |
| ೯. | ಶ್ರೀ ಎಂ. ಪಿ. ಎಂ.ಬಸವಲಿಂಗನಗೌಡ | ಮುಖ್ಯೋಪಾಧ್ಯಾಯರು | ೫೬ | ಹರಪನಹಳ್ಳಿ |
| ೧೦. | ಶ್ರೀ ವಿರೇಶ ಬಾಗಳಿ | ಶ್ರೀಗಳವರ ಸೇವೆ | ೨೬ | ಹರಪನಹಳ್ಳಿ |
| ೧೧. | ಶ್ರೀ ದೇವರಮನಿ ಕೊಟ್ರೇಶ | ಉಪನ್ಯಾಸಕರು | ೫೦ | ಕೊಟ್ಟೂರು |
| ೧೨ | ಶ್ರೀ ಶಿವರಾಜ ಮುದ್ದಿ | ನಿವೃತ್ತ ಉಪನ್ಯಾಸಕರು | ೫೯ | ಹರಪನಹಳ್ಳಿ |
| ೧೩. | ಶ್ರೀ ಡಿ.ಬಿ. ಮೈಲಾರ | ಉಪನ್ಯಾಸಕರು | ೫೫ | ಹರಪನಹಳ್ಳಿ |
| ೧೪. | ಶ್ರೀ ತಿರುಕನಗೌಡ | ಉಪನ್ಯಾಸಕರು | ೫೬ | ಹರಪನಹಳ್ಳಿ |
| ೧೫. | ಶ್ರೀ ಎಂ.ಪಿ.ಎಂ. ದಯಾನಂದ ಸ್ವಾಮಿ | ಉಪನ್ಯಾಸಕರು | ೫೫ | ಹರಪನಹಳ್ಳಿ |
| ೧೬. | ಶ್ರೀ ಕುಬೇಂದ್ರಪ್ಪ | ಪ್ರಾಂಶುಪಾಲರು | ೫೬ | ಹರಪನಹಳ್ಳಿ |
| ೧೭. | ಶ್ರೀ ಪಿ.ಎಂ. ಶಿವಕುಮಾರ | ಉಪನ್ಯಾಸಕರು | ೪೦ | ಹರಪನಹಳ್ಳಿ |
| ೧೮. | ಶ್ರೀ ಹೆಚ್. ಮಲ್ಲಿಕಾರ್ಜುನ | ಉಪನ್ಯಾಸಕರು, ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ | ೩೭ | ಹರಪನಹಳ್ಳಿ |

| | | | | |
|---|---|---|---|---|
| ೧೯. | ಶ್ರೀ ಕೆ.ಎಂ. ಮಾಂತಯ್ಯ | ಉಪನ್ಯಾಸಕರು | ೪೦ | ಹರಪನಹಳ್ಳಿ |
| ೨೦. | ಶ್ರೀ ದಾದಾಪೀರ್ | ಉಪನ್ಯಾಸಕರು | ೩೬ | ಹರಪನಹಳ್ಳಿ |
| ೨೧. | ಶ್ರೀ ಜಿ. ಮಲ್ಲಿಕಾರ್ಜುನ | ಕಚೇರಿ ಸಹಾಯಕರು | ೩೮ | ಹರಪನಹಳ್ಳಿ |
| ೨೨. | ಕುಮಾರಿ, ಜಿ ಭುವನೇಶ್ವರಿ | ದ್ವಿತೀಯ ಪಿ.ಯು.ಸಿ. | ೧೮ | ಹರಪನಹಳ್ಳಿ |
| ೨೩. | ಶ್ರೀ ಎ. ನಾಗರಾಜ | ಶಿಕ್ಷಕರು | ೨೨ | ಕೋಡಿಹಳ್ಳಿ |
| ೨೪. | ಶ್ರೀಮತಿ ರಾಧಾ | ಉಪನ್ಯಾಸಕಿ | ೩೫ | ಹರಪನಹಳ್ಳಿ |

## ಸಂಸ್ಥೆಯ ಹುಟ್ಟು ಬೆಳವಣಿಗೆಯಲ್ಲಿ ಸಕ್ರಿಯವಾಗಿ ಪಾಲುಗೊಂಡವರು

೧. ಶ್ರೀ ವೇ. ಟಿ.ಎಂ. ಪಂಚಾಕ್ಷರಯ್ಯ

೨. ಶ್ರೀ ವೇ . ಟಿ.ಎಂ. ಗಂಗಾಧರಯ್ಯ

೩. ಶ್ರೀ ವೇ. ಎಚ್.ಎಂ. ಏಕಾಂತಯ್ಯ

೪. ಶ್ರೀ ಕೊಟಗಿ ಮಲಕಪ್ಪ

೫. ಶ್ರೀ ಗೊಂಗಡಿ ವಿರುಪಾಕ್ಷಪ್ಪ

೬. ಶ್ರೀ ಅಂಬಲಿ ಶಿವಶಂಕರಪ್ಪ

೭. ಶ್ರೀ ಹಾವೇರಿ ಗುರುಸಿದ್ಧಪ್ಪ

೮. ಶ್ರೀ ಬೆನ್ನೂರು ಶ್ರೀಧರಪ್ಪ

೯. ಶ್ರೀ ಎಂ. ಪದ್ಮರಾಜ

೧೦ ಶ್ರೀ ವೇ ಟಿ.ಎಂ.ಬಸವಲಿಂಗಯ್ಯ

೧೧ ಶ್ರೀ ಟಿ.ಎಂ. ಸೋಮಯ್ಯ

೧೨ ಶ್ರೀ ಕಟ್ಟಿ ಸೇತುರಾಮಾಚಾರ್

೧೩ ಶ್ರೀ ವೇ ಸಿ.ಜಿ.ಎಂ.ಚನ್ನವೀರಸ್ವಾಮಿ

೧೪ ಶ್ರೀಎಂ. ನಾರಾಯಣಶ್ರೇಷ್ಠಿ

೧೫ ಶ್ರೀ ಡಿ. ನಾರಾಯಣದಾಸ್

೧೬ ಶ್ರೀ ಬೆನ್ನೂರು ನಾಗಪ್ಪ

೧೭ ಶ್ರೀ ಕೊಟಗಿ ವೀರಣ್ಣ

೧೮ ಶ್ರೀ ಗೊಂಗಡಿ ಬಸವರಾಜ

೧೯ ಶ್ರೀ ವೇ. ಟಿ.ಎಂ.ಮಂಜುನಾಥ

೨೦ ಶ್ರೀ ವೇ. ಟಿ.ಎಂ. ಚಂದ್ರಶೇಖರಯ್ಯ

## ಆಕರ ಗ್ರಂಥಗಳು


೧. ತೆಗ್ಗಿನಮಠದ ಚಂದ್ರಶೇಖರ ಶಿವಾಚಾರ್ಯರು
ಲೇಖಕರು : ಎಂ. ಪಿ. ಎಂ. ಶಾಂತವೀರಯ್ಯ

೨. ಕ್ರಿಯಾಶೀಲ
ಪ್ರಧಾನ ಸಂಶೋಧಕರು: ಅ. ಸಿ. ಹಿರೇಮಠ ಮತ್ತು ಶ್ರೀಎಂ.ಪಿ.ಎಂ.ಶಾಂತವೀರಯ್ಯ

೩. ಕರ್ತಾರನ ಕ್ರಾಂತದೃಷ್ಟಿ :
ಲೇಖಕರು ; ಡಾ. ಎಸ್. ಎಂ. ಗಂಗಾಧರಯ್ಯ

೪. ಜ್ಞಾನ ದೀವಟಿಗೆ
ಪ್ರಧಾನ ಸಂಶೋಧಕರು: ಅ. ಸಿ. ಹಿರೇಮಠ ಮತ್ತು ಶ್ರೀ ಎಂ. ಪಿ. ಎಂ. ಶಾಂತವೀರಯ್ಯ

೫. ತೆಗ್ಗಿನಮಠದ ಕಲಾ ಮತ್ತು ಶಿಕ್ಷಣ ಸಂಸ್ಥೆ, ಹರಪನಹಳ್ಳಿ
ಲೇಖಕರು : ಅ. ಸಿ. ಹಿರೇಮಠ

೬. The Divine light :
Author . Shree , A. C. Chikkamath

೭. ಹರಪನಹಳ್ಳಿ ತಾಲೂಕ ಸ್ವಾತಂತ್ರ್ಯ ಹೋರಾಟಗಾರರು:
ಲೇಖಕರು : ಶ್ರೀ, ವೀರಭದ್ರಯ್ಯ ಹಿರೇಮಠ ವಕೀಲರು

೮. ಜನ-ಜನಪದ- ಜಾನಪದ
ಲೇಖಕರು: ಡಾ. ಚಿದಾನಂದಮೂರ್ತಿ

೯. ಕಾನಾಮಡುವಿನ ಶ್ರೀ ಶರಣಾರ್ಯ ಸ್ವಾಮಿಗಳು :
ಲೇಖಕರು : ಶ್ರೀ, ಬಿ. ನಂಜುಂಡಪ್ಪ

೧೦. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ದರ್ಶನ :
ಲೇಖಕರು : ಕುಂ. ಬಾ. ಸದಾಶೀವಪ್ಪ

೧೧. ಹರಪನಹಳ್ಳಿ ಪಾಳೇಗಾರರು.
ಲೇಖಕರು : ಕುಂ. ಬಾ. ಸದಾಶೀವಪ್ಪ

೧೨. ಶರಣ ಬಸವೇಶ್ವರ ದಾಸೋಹ ಮಠ:
ಲೇಖಕರು : ಎಸ್.ಎಂ.ಹಿರೇಮಠ

೧೩. ಶರಣಬಸವೇಶ್ವರ :
ಎಸ್.ಎಂ. ಹಿರೇಮಠ

೧೪. ಉತ್ತರ ಕರ್ನಾಟಕದ ಜನಪದ ವೀರಗೀತೆಗಳು:
ಲೇಖಕರು : ಡಾ. ವಾಯ್. ಎಫ್. ಸೈದಾಮರ

೧೫. ಶರಣರು ಗುರುತಿಸಿದ ಬದುಕಿನ ಮೌಲ್ಯಗಳು :
ಲೇಖಕರು : ಟಿ. ಆರ್. ಮಹಾದೇವಯ್ಯ.

೧೬. ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯ:
ಲೇಖಕರು ಶ್ರೀ, ಸಂಗಮೇಶ ಗುಜಗುಂಡ
೧೭. ಹಂತಿಯ ಪದಗಳ ಸೊಗಸು
ಲೇಖಕರು: ಶ್ರೀ. ಎಸ್. ಆರ್. ಗೌಡರ್
೧೮. ಜಾನಪದ ಮೆಲುಕು:
ಲೇಖಕರು: ಡಾ. ಎನ್. ಆರ್. ನಾಯಕ
೧೯. ವೀರಶೈವ ಧರ್ಮ ಗ್ರಂಥಗಳು :
ಲೇಖಕರು ; ಡಾ ಮಲ್ಲಿಕಾರ್ಜುನ ಪರಡ್ಡಿ
೨೦. ಹರಪನಹಳ್ಳಿ ಭೀಮವ್ವನ ಹಾಡುಗಳು:
ಲೇಖಕರು : ಸರಿತಾ ಕುಸುಮಕರ ದೇಸಾಯಿ
೨೧. ಜಾನಪದ ಸಾಹಿತ್ಯ ಸಂಗ್ರಹ
ಲೇಖಕರು: ಶ್ರೀ, ಕೆ ವಿರೂಪಾಕ್ಷಗೌಡ, ಕಲ್ಲೇಶ್ ಇಟಗಿ, ಕರಿವೀರನಗೌಡ ಪಾಟೀಲ
೨೨. ಸೂಕ್ಷ್ಮಾಗಮ (ಕ್ರಿಯಾಪದ)
ಅನುವಾದಕರು: ಶ್ರೀ, ಷಣ್ಮುಕಯ್ಯ ಅಕ್ಕೂರಮಠ
೨೩. ಜನಪದ ಹಾಸ್ಯ
ಲೇಖಕರು : ಶ್ರೀ, ಎಸ್. ಬಿ. ಶೀಲವಂತಮಠ
೨೪. ಲಿಂಗ ಮತ್ತು ಕಂತಿ :
ಲೇಖಕರು: ಡಾ. ಸತ್ಯನಾರಾಯಣ ಭಟ್
೨೫. ಜಾನಪದ : ಸ್ವರೂಪ ಮತ್ತು ಸಾಹಿತ್ಯ :
ಲೇಖಕರು ಪ್ರೊ. ಡಿ. ಲಿಂಗಯ್ಯ
೨೬. ಜಾನಪದ ಗ್ರಹಿಕೆ : ಪರಿಕಲ್ಪನೆ :
ಲೇಖಕರು : ಪ್ರೊ. ಹಿ. ಶಿ. ರಾಮಚಂದ್ರೇಗೌಡ
೨೭. ನಾಗನೂರು ಶಿವಬಸವ ಸ್ವಾಮಿಗಳು :
ಲೇಖಕರು: ಡಾ. ಸ. ಜ. ನಾಗಲೋಟಿಮಠ
೨೮. ಜಾನಪದ ಸಾಹಿತ್ಯದಲ್ಲಿ ಮಹಿಳೆ
ಲೇಖಕರು: ಡಾ. ಕೆ. ಆರ್. ಸಂಧ್ಯಾರೆಡ್ಡಿ
೨೯. ಕನಾಟಕದ ವೀರಶೈವ ಮಠಗಳು :
ಲೇಖಕರು: ಶ್ರೀ, ಚಂದ್ರಶೇಖರ ನಾರಾಯಣಪುರ
೩೦. ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ ಇತರೇ ಪತ್ರಿಕೆಗಳ ಸಂಪಾದನೆ
೩೧. ಶಿವಾಚಾರ್ಯ ರತ್ನ ದೀಪ್ತಿ :
ಲೇಖಕರು : ಮಧುಬಗರೆ ಮತ್ತು ಹೆಚ್. ಈ. ಎಂ. ಜಯದೇವ
೩೨. ಶುಭಾಷಿತಾ ಅಮೃತ : ಅನುವಾದ: ಶ್ರೀ ಸರ್ಪಭೂಷಣಶಿವಾಚಾರ್ಯರು
೩೩. ಸಂಸ್ಕೃತ ಸಾಹಿತ್ಯ ಲೋಕ : ಅನುವಾದ: ಶ್ರೀ ಸರ್ಪಭೂಷಣಶಿವಾಚಾರ್ಯರು



ಹಳೆಯ ತೆಗ್ಗಿನ ಮಠದ ನೋಟ

ಹೊಸ ತೆಗ್ಗಿನ ಮಠದ ನೋಟ



ಶ್ರೀ ಲಿಂ.ಚಂದ್ರಶೇಖರ ಶ್ರೀಗಳು



ಶ್ರೀ ಚಂದ್ರಮೌಳೇಶ್ವರ ಸ್ವಾಮಿಗಳು

ಭೂತಪ್ಪನ ದೇವಸ್ಥಾನದ ಹೊರನೋಟ



ಭೂತಪ್ಪನ ದೇವಸ್ಥಾನದ ಒಳನೋಟ



ವಿದ್ಯಾಸಾಗರ ಪ್ರಶಸ್ತಿಯನ್ನು ಹಿರಿಯೂರು ಸಮಾರಂಭದಲ್ಲಿ ಸ್ವೀಕರಿಸುತಿರುವುದು

ತೆಗ್ಗಿನ ಮಠದ ಪಂಚಾಗ ಬಿಡುಗಡೆ ಸಮಾರಂಭ



ಶ್ರೀಗಳವರ ಅಡ್ಡ ಪಲ್ಲಕ್ಕಿ ಉತ್ಸವ



ಕಾರ್ಗಿಲ್ ಯುದ್ಧ ಸಂತ್ರಸ್ತರಿಗೆ ನಿಧಿ ಸಂಗ್ರಹ




ಶ್ರೀಗಳವರಿಂದ ಸೋಗಿ ಗ್ರಾಮದವರಿಗೆ ನಿವೇಶನದ ಪೂಜಾ ಸಮಾರಂಭ



ಶ್ರೀಗಳವರ ಸಮ್ಮುಖದಲ್ಲಿ

ಮಾನ್ಯ ಶ್ರೀ ಎಂ.ಪಿ.ಪ್ರಕಾಶ್ ಹಾಗೂ ನಂದಿಹಳ್ಳಿ ಹಾಲಪ್ಪ ಶಾಸಕರ ಸಮ್ಮುಖದಲ್ಲಿ ನಿವೇಶನ ವಿತರಣಾ ಕಾರ್ಯಕ್ರಮ




ಸಿದ್ಧಾಂತ ಶಿಖಾಮಣಿ ಕುರಿತು ಕಾರ್ಯಾಗಾರ



ಗ್ರಾಮಿಣ ವಿಕಾಸ ಟ್ರಸ್ಟ್‌ನ ಒಂದು ಕಾರ್ಯಕ್ರಮ




ಬಿ.ಬಿ.ಎಂ.ಶಿಕ್ಷಣ ಮಹಾವಿದ್ಯಾಲಯ ಗಂಗಾವತಿ



ಶ್ರೀ ಬೆಟ್ಟದ ಮಲ್ಲೇಶ್ವರ ಕಲ್ಯಾಣ ಮಂಟಪದ ನೋಟ



ಶ್ರೀಗಳವರ ಸಮ್ಮುಖದಲ್ಲಿ ತೆಗ್ಗಿನ ಮಠದಲ್ಲಿ ಸಾಮೂಹಿಕ ವಿವಾಹ



ಸಾಮೂಹಿಕ ವಿವಾಹದ ನೋಟ

ತೆಗ್ಗಿನ ಮಠದಲ್ಲಿ ರಕ್ತರಾತ್ರಿ ನಾಟಕದ ಒಂದು ದೃಶ್ಯ



ತೆಗ್ಗಿನ ಮಠದಲ್ಲಿ ರಕ್ತರಾತ್ರಿ ನಾಟಕದ ಒಂದು ನೋಟ

